KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಏಪ್ರಿಲ್ ೨೯, ೨೦೧೦ (ವೈಶಾಖ ೯, ಶಕ ವರ್ಷ ೧೯೩೨) | ಸಂಚಿಕೆ ೧೭ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ**

**"ಸರ್ಕಾರದ ಕೆಲಸ–ದೇವರ ಕೆಲಸ"**

**ಅಧಿಕೃತ ಜ್ಞಾಪನಾ ಪತ್ರ**

**ಸಂ.ಗ್ರಾಲೆ/ಸಿಬ್ಬಂದಿ/ವಿವ/37/09–10, ದಿನಾಂಕ: 25ನೇ ಮಾರ್ಚ್ 2010**

**ವಿಷಯ:** ದಾವಣಗೆರೆ ಜಿಲ್ಲೆ ಕಂದಾಯ ಇಲಾಖೆಯ ಗ್ರಾಮ ಲೆಕ್ಕಾಧಿಕಾರಿ ಖಾಲಿ ಹುದ್ದೆಗಳಿಗೆ ನೇರ ನೇಮಕಾತಿ– ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂ. ಆರ್‌ಡಿ 299 ಬಿಎಸ್‌ಸಿ 2006 ದಿ:3.2.2009.

2) ಸರ್ಕಾರದ ಅಧಿಸೂಚನೆ ಸಂ. ಕಂಇ 299 ಬಿಎಸ್‌ಸಿ 2006 ದಿ:24.7.2009, 8.9.2009.

3) ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 26.9.2009 ಮತ್ತು ಪತ್ರಿಕಾ ಪ್ರಕಟಣೆ ದಿನಾಂಕ: 30.9.2009

4) ಸರ್ಕಾರದ ಆದೇಶ ಸಂ. ಆರ್‌ಡಿ 130 ಬಿಎಸ್‌ಸಿ 2007 ದಿನಾಂಕ: 19.2.2009

5) ಈ ಕಚೇರಿಯ ಸಮಸಂಖ್ಯೆಯ .ಅಂತಿಮ ಆಯ್ಕೆ ಪಟ್ಟಿ ದಿನಾಂಕ: 30.12.2009.

6) ಈ ಕಚೇರಿಯ ಸಮಸಂಖ್ಯೆಯ ಅಧಿಕೃತ ಜ್ಞಾಪನಾ ಪತ್ರ ದಿನಾಂಕ: 6.3.2010

**"ಆಯ್ಕೆಯಾಗಿರುವ ಎಲ್ಲಾ ಅಭ್ಯರ್ಥಿಗಳಿಗೆ ಹಾರ್ದಿಕ ಅಭಿನಂದನೆಗಳು ಹಾಗೂ ಜಿಲ್ಲಾಡಳಿತದ ಪರವಾಗಿ ಸರ್ಕಾರಿ ಸೇವೆಗೆ ಆತ್ಮೀಯ ಸ್ವಾಗತ "**

ಸರ್ಕಾರದ ಉಲ್ಲೇಖ (1)ರ ಅಧಿಸೂಚನೆಯನ್ವಯ ದಾವಣಗೆರೆ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ 24 ಹುದ್ದೆಗಳಿಗೆ ಹಾಗೂ ಉಲ್ಲೇಖ (4)ರಲ್ಲಿ ದಾವಣಗೆರೆ ಜಿಲ್ಲೆಗೆ ಪ್ರತಿ ತಾಲ್ಲೂಕು ಕಚೇರಿಯ ಭೂಮಿ ಕೇಂದ್ರಗಳಿಗೆ ತಲಾ 3 ರಂತೆ 6 ತಾಲ್ಲೂಕು ಕೇಂದ್ರಗಳಿಗೆ ಮಂಜೂರಾತಿ ನೀಡಿರುವ 18 ಹುದ್ದೆಗಳಿಗೆ ಒಟ್ಟು 42 ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.

ಅದರಂತೆ, ಕರ್ನಾಟಕ ನಾಗರೀಕ ಸೇವೆ (Revenue Sub Ordinate Branch) (Cadre & Recruitment) (Amendment) ನಿಯಮಗಳು, 2009ರಲ್ಲಿ ನಿಗಧಿಪಡಿಸಿರುವ ವಿದ್ಯಾರ್ಹತೆ ಅನ್ವಯ ಮೇಲ್ಕಂಡ ಖಾಲಿ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ (3)ರ ಅಧಿಸೂಚನೆಯ ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತೆ ಮತ್ತು ಮೀಸಲಾತಿ ಅನ್ವಯ ವಿಂಗಡಿಸಿ, ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ: 30.11.2009ರಂದು ಪ್ರಕಟಿಸಲಾಯಿತು ಹಾಗೂ ಈ ಪಟ್ಟಿಯ ಬಗ್ಗೆ ಆಕ್ಷೇಪಣೆ / ತಕರಾರು ಅರ್ಜಿಗಳನ್ನು ಸಲ್ಲಿಸಲು ದಿನಾಂಕ: 14.12.2009ರವರೆಗೆ ಕಾಲಾವಕಾಶವನ್ನು ನೀಡಲಾಯಿತು.

ಪರಿಶೀಲನಾ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ದಿನಾಂಕ: 15.12.2009 ರಂದು ಪರಿಶೀಲಿಸಿ, ಮಾನ್ಯ ಕರ್ನಾಟಕ ಆಡಳಿತಾತ್ಮಕ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂ. 5887–5898/ 2009 ಪ್ರಕರಣಗಳ ಅಂತಿಮ ತೀರ್ಮಾನಕ್ಕೊಳಪಡುವ ಷರತ್ತಿನ ಮೇರೆಗೆ ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ: 30.12.2009ರಂದು ಪ್ರಕಟಿಸಲಾಯಿತು.

ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಂದ ದಿನಾಂಕ: 11.1.2010 ರಂದು ಮೂಲ ದಾಖಲಾತಿಗಳನ್ನು ಪಡೆಯಲಾಯಿತು. ಮೂಲ ದಾಖಲಾತಿಗಳನ್ನು ಹಾಜರುಪಡಿಸದೇ ಇರುವ 4 ಸಾಮಾನ್ಯ (General) ಅಭ್ಯರ್ಥಿಗಳ ಬದಲಾಗಿ ಕಾಯ್ದಿರಿಸಿದ ಪಟ್ಟಿಯಲ್ಲಿನ ಅಭ್ಯರ್ಥಿಗಳಿಂದ ದಿನಾಂಕ: 8.2.2010ರಂದು ಮೂಲ ದಾಖಲಾತಿಗಳನ್ನು ಪಡೆಯಲಾಯಿತು.

ಮೇಲ್ಕಂಡ ಅಂಶಗಳ ಅವಲೋಕನೆಯಿಂದ, ಪೋಲೀಸ್ ಪರಿಶೀಲನಾ ವರದಿ ಮತ್ತು ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಬಂದಂತಹ ಅಭ್ಯರ್ಥಿಗಳಿಗೆ ಉಲ್ಲೇಖ (6) ರಂತೆ ಈಗಾಗಲೇ ನೇಮಕಾತಿ ಆದೇಶ ನೀಡಲಾಗಿದೆ. ಮುಂದುವರೆದಂತೆ, ಪೋಲೀಸ್ ಪರಿಶೀಲನಾ ವರದಿ ಮತ್ತು ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಬಂದಂತಹ ಈ ಕೆಳಕಂಡ ಅಭ್ಯರ್ಥಿಗಳನ್ನು ಗ್ರಾಮ ಲೆಕ್ಕಾಧಿಕಾರಿಯ ಹುದ್ದೆಯ ರೂ.5800–100–6000–125–6500–150–7100–175–7800–200–8600–225–9500–250–10500 ವೇತನ ಶ್ರೇಣಿಯಲ್ಲಿ, ಅವರ ಹೆಸರಿನ ಎದುರು ನಮೂದಿಸಲ್ಪಟ್ಟ ಕಾರ್ಯಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳಿಗನುಸಾರವಾಗಿ ನೇಮಕಾತಿಗೊಳಿಸಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ<br>ಸರ್ವಶ್ರೀ / ಶ್ರೀಮತಿ / ಕುಮಾರಿ:ಕುಮಾರ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| | **ಸಾಮಾನ್ಯ ವರ್ಗ** | | |
| 1. | ವಿಜಯಕುಮಾರ ಉಡಿಗೋಳಮಠದ<br>ಬಿನ್ ಬಸವರಾಜಯ್ಯ ಯು.ಎಂ.<br>ಮುತ್ತಿಗೆ, ನಿಚ್ಚಾಪುರ ಅಂಚೆ,<br>ಹರಪನಹಳ್ಳಿ ತಾ:, ದಾವಣಗೆರೆ ಜಿಲ್ಲೆ | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ,<br>ಹರಪನಹಳ್ಳಿ ತಾಲ್ಲೂಕು | ತಹಶೀಲ್ದಾರ್,<br>ಹರಪನಹಳ್ಳಿ<br>ತಾಲ್ಲೂಕು |
| 2. | ಮಾಲತೇಶ ಅಂಗಡಿ<br>ಬಿನ್ ನಾಗೇಶಪ್ಪ ಎನ್.ಎ.<br>ಹಾರಕನಾಳು ಅಂಚೆ, ಹರಪನಹಳ್ಳಿ ತಾ:<br>ದಾವಣಗೆರೆ ಜಿಲ್ಲೆ. | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ,<br>ಜಗಳೂರು ತಾಲ್ಲೂಕು | ತಹಶೀಲ್ದಾರ್,<br>ಜಗಳೂರು<br>ತಾಲ್ಲೂಕು |
| | **ಪರಿಶಿಷ್ಟ ಜಾತಿ** | | |
| 3. | ಶಿವಕುಮಾರ ಕೆ.<br>ಬಿನ್ ಕೀಮ್ಯಾನಾಯ್ಕ,<br>ಕಂಚಿಗನಾಳು ಅಂಚೆ, ಚನ್ನಗಿರಿ ತಾ:<br>ದಾವಣಗೆರೆ ಜಿಲ್ಲೆ. | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ,<br>ಹರಿಹರ ತಾಲ್ಲೂಕು | ತಹಶೀಲ್ದಾರ್,<br>ಹರಿಹರ ತಾಲ್ಲೂಕು |
| 4. | ಮೇಘಾ ಪಿ.ಕೆ.<br>ಬಿನ್ ಕರಿಯಪ್ಪ ಪಿ.<br>ಪಳಿಕೆಹಳ್ಳಿ, ಅಳಗವಾಡಿ ಅಂಚೆ,<br>ಚಿತ್ರದುರ್ಗ ತಾ: ಮತ್ತು ಜಿಲ್ಲೆ. | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ,<br>ದಾವಣಗೆರೆ ತಾಲ್ಲೂಕು | ತಹಶೀಲ್ದಾರ್,<br>ದಾವಣಗೆರೆ<br>ತಾಲ್ಲೂಕು |
| 5. | ವೀರೇಶ ಬಿ. ಬಿನ್ ಅಂಜನಪ್ಪ<br>ಬೇವಿನಹಳ್ಳಿ, ಪೋತಲಕಟ್ಟೆ ಅಂಚೆ,<br>ಹರಪನಹಳ್ಳಿ ತಾ:, ದಾವಣಗೆರೆ ಜಿಲ್ಲೆ | ಗ್ರಾಮ ಲೆಕ್ಕಿಗ,<br>ಚೀಲೂರು ವೃತ್ತ<br>ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್,<br>ಹೊನ್ನಾಳಿ ತಾಲ್ಲೂಕು |
| | **ಪರಿಶಿಷ್ಟ ಪಂಗಡ** | | |
| 6. | ಹನುಮಂತಪ್ಪ ಆರ್. ಬಿನ್ ಸಣ್ಣಬಸಪ್ಪ<br>ಲೋಲೇಶ್ವರ ಗ್ರಾಮ, ಬೆಣ್ಣೆಹಳ್ಳಿ ಅಂಚೆ<br>ಹರಪನಹಳ್ಳಿ ತಾ:, ದಾವಣಗೆರೆ ಜಿಲ್ಲೆ. | ಗ್ರಾಮ ಲೆಕ್ಕಿಗ,<br>ಹನುಮನಹಳ್ಳಿ ವೃತ್ತ<br>ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್.<br>ಹೊನ್ನಾಳಿ ತಾಲ್ಲೂಕು |

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಸರ್ವಶ್ರೀ / ಶ್ರೀಮತಿ / ಕುಮಾರಿ:ಕುಮಾರ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| 7. | ನೀಲಮ್ಮ ಬಂಗೇರ ಬಿನ್ ಅಂಜನಪ್ಪ ಬಿ. ಗುಂಡಗತ್ತಿ ಅಂಚೆ, ಹರಪನಹಳ್ಳಿ ತಾ: ದಾವಣಗೆರೆ ಜಿಲ್ಲೆ. | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ಹರಿಹರ ತಾಲ್ಲೂಕು | ತಹಶೀಲ್ದಾರ್, ಹರಿಹರ ತಾಲ್ಲೂಕು |
| | **ಪ್ರವರ್ಗ 2–ಎ** | | |
| 8. | ರಾಜಪ್ಪ ಕನ್ನಾವರ ಬಿನ್ ಹುಚ್ಚಪ್ಪ ಕನ್ನಾವರ ದುಗ್ಗಾವತಿ ಪೋಸ್ಟ್, ಹರಪನಹಳ್ಳಿ ತಾ: ದಾವಣಗೆರೆ ಜಿಲ್ಲೆ | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ಚನ್ನಗಿರಿ ತಾಲ್ಲೂಕು | ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು |
| 9. | ಶಿಲ್ಪಾ ಕೆ.ಆರ್. ಬಿನ್ ರುದ್ರಪ್ಪ ಕೆ. ವೀರಭದ್ರೇಶ್ವರ ನಿಲಯ, ದುರ್ಗಿಗುಡಿ, 9ನೇ ಕ್ರಾಸ್, ಹೊನ್ನಾಳಿ, ದಾವಣಗೆರೆ ಜಿಲ್ಲೆ | ಗ್ರಾಮ ಲೆಕ್ಕಿಗ, ಮಾದೇನಹಳ್ಳಿ ವೃತ್ತ ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್, ಹೊನ್ನಾಳಿ ತಾಲ್ಲೂಕು |
| 10. | ಪ್ರಕಾಶ ಬಿ. ಬಿನ್ ಬಸಪ್ಪ ಎನ್. ತಾಳೀಕಟ್ಟೆ ಪೋಸ್ಟ್, ಹೊಳಲ್ಕೆರೆ ತಾ: ಚಿತ್ರದುರ್ಗ ಜಿಲ್ಲೆ. | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ಚನ್ನಗಿರಿ ತಾಲ್ಲೂಕು | ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು |
| 11. | ಕವಿತಾ ಆರ್. ಬಿನ್ ರಾಮನಗೌಡ ಭಾರತ ಕಾಲೋನಿ, 7ನೇ ಕ್ರಾಸ್, ದಾವಣಗೆರೆ | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ದಾವಣಗೆರೆ ತಾಲ್ಲೂಕು | ತಹಶೀಲ್ದಾರ್, ದಾವಣಗೆರೆ ತಾಲ್ಲೂಕು |
| 12. | ಕವಿರಾಜ ಟಿ.ವೈ. ಬಿನ್ ಯಲ್ಲಪ್ಪ ಟಿ. ತಾಳೀಕಟ್ಟೆ ಪೋಸ್ಟ್, ಹೊಳಲ್ಕೆರೆ ತಾ: ಚಿತ್ರದುರ್ಗ ಜಿಲ್ಲೆ. | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ಚನ್ನಗಿರಿ ತಾಲ್ಲೂಕು | ತಹಶೀಲ್ದಾರ್, ಚನ್ನಗಿರಿ ತಾಲ್ಲೂಕು |
| | **ಪ್ರವರ್ಗ 2–ಬಿ** | | |
| 13. | ಅಪ್ಸನಾ ಎಸ್. ಬಿನ್ ಸೈಯದ್ ರಹೀಂ ಆವಿನಹಳ್ಳಿ ಅಂಚೆ, ಸಾಗರ ತಾಲ್ಲೂಕು ಶಿವಮೊಗ್ಗ ಜಿಲ್ಲೆ. | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್, ಹೊನ್ನಾಳಿ ತಾಲ್ಲೂಕು |
| | **ಪ್ರವರ್ಗ 3–ಬಿ** | | |
| 14. | ಪಲ್ಲವಿ ಹೆಚ್. ಬಿನ್ ವಿಜಯಕುಮಾರ ಆನೆಕೊಂಡ ಕೆರೆ, ದಾವಣಗೆರೆ, ದಾವಣಗೆರೆ ತಾ: ಮತ್ತು ಜಿಲ್ಲೆ | ಗ್ರಾಮ ಲೆಕ್ಕಿಗ, ಭೂಮಿ ಕೇಂದ್ರ, ಹರಿಹರ ತಾಲ್ಲೂಕು | ತಹಶೀಲ್ದಾರ್, ಹರಿಹರ ತಾಲ್ಲೂಕು |

ಎಲ್ಲಾ ಅಭ್ಯರ್ಥಿಗಳು ಗ್ರಾಮೀಣ ಜನರ ಸೇವೆಗೆ ಕಂಕಣಬದ್ದರಾಗಿ, ನಿಷ್ಠೆ, ಪ್ರಾಮಾಣಿಕತೆ ಹಾಗೂ ನಿಸ್ಪೃಹತೆಯಿಂದ ಕರ್ತವ್ಯ ನಿರ್ವಹಿಸಲು ತಿಳಿಸಿದೆ.

**ಷರತ್ತುಗಳು:**

1) ಈ ನೇಮಕಾತಿಯು ಮಾನ್ಯ ಕರ್ನಾಟಕ ಆಡಳಿತಾತ್ಮಕ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂ. 5887–5898/2009 ಪ್ರಕರಣಗಳ ಅಂತಿಮ ತೀರ್ಮಾನಕ್ಕೊಳಪಡುವ ಷರತ್ತಿಗೊಳಪಟ್ಟಿದೆ.
2) ಮೇಲ್ಕಂಡ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿನಗಳೊಳಗಾಗಿ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಈ ನೇಮಕವನ್ನು ಒಂದು ವೇಳೆ ತಿರಸ್ಕರಿಸಿದ್ದಲ್ಲಿ, ಆದೇಶ ಸ್ವೀಕರಿಸಿದ 7 ದಿನಗಳೊಳಗಾಗಿ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು.
3) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗಾಗಿ ಹಾಜರ್ ಪಡಿಸಬೇಕು 1) ಪಿಯುಸಿ ಅಂಕಪಟ್ಟಿ 2) ಎಸ್‌ಎಸ್‌ಎಲ್‌ಸಿ / ಹುಟ್ಟಿದ ದಿನಾಂಕದ ದೃಢೀಕರಣ 3) ನಡತೆ

ಪ್ರಮಾಣ ಪತ್ರ 4) ವೈದ್ಯಕೀಯ ಪ್ರಮಾಣ ಪತ್ರ 5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ)

4) ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ 3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗಧಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ಕೆಲಸಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲಾಗುವುದು.

5) ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡುಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲಾಗುವುದು.

6) ಅಭ್ಯರ್ಥಿಗಳು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಾತ್ಮಕವಾಗಿ ಗೊತ್ತುಪಡಿಸಿದ ನಮೂನೆಯಲ್ಲಿ **"ವಚನ"** ಸ್ವೀಕಾರ ಮಾಡತಕ್ಕದ್ದು.

7) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ. ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005 ದಿನಾಂಕ:31.3.2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.

8) ಸರ್ಕಾರದ ಸುತ್ತೋಲೆ ಸಂ.ಕಂಇ 54 ಬಿಎಸ್‌ಸಿ 2007 ದಿನಾಂಕ: 27.3.2007ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ದಾವಣಗೆರೆ ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 5 ವರ್ಷಗಳ ಸೇವೆಯನ್ನು ಕಡ್ಡಾಯ ಪೂರೈಸತಕ್ಕದ್ದು.

9) ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ ಗುರುತಿನ ಚೀಟಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.

10) ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 : ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957 : ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

11) ಇದು ನೇರನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.

12) ಗ್ರಾಮ ಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ, ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

13) ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ / ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

14) ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

15) ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

16) ಆಯ್ಕೆಯಾಗಿರುವ ಅಭ್ಯರ್ಥಿಗಳು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು.ಈ ಬಗ್ಗೆ ಒಂದು ಪ್ರಮಾಣಪತ್ರವನ್ನು (ನಮೂನೆಯಂತೆ) ನೋಟರಿಯವರಿಂದ ಪ್ರಮಾಣೀಕರಿಸಿ ಹಾಜರುಪಡಿಸಬೇಕು.

**ಕೆ. ಅಮರನಾರಾಯಣ**

ಪಿ.ಆರ್. 242

ಅಧ್ಯಕ್ಷರು, ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ
ಪ್ರಾಧಿಕಾರ ಮತ್ತು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ**

**"ಸರ್ಕಾರದ ಕೆಲಸ–ದೇವರ ಕೆಲಸ"**

**ಅಧಿಕೃತ ಜ್ಞಾಪನಾ ಪತ್ರ**

**ಸಂ.ಗ್ರಾಲೆ/ಸಿಬ್ಬಂದಿ/ವಿವ/37/09–10, ದಿನಾಂಕ: 7ನೇ ಏಪ್ರಿಲ್ 2010**

**ವಿಷಯ:** ದಾವಣಗೆರೆ ಜಿಲ್ಲೆ ಕಂದಾಯ ಇಲಾಖೆಯ ಗ್ರಾಮ ಲೆಕ್ಕಾಧಿಕಾರಿ ಖಾಲಿ ಹುದ್ದೆಗಳಿಗೆ ನೇರ ನೇಮಕಾತಿ– ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂ. ಆರ್‌ಡಿ 299 ಬಿಎಸ್‌ಸಿ 2006 ದಿ:3.2.2009.

2) ಸರ್ಕಾರದ ಅಧಿಸೂಚನೆ ಸಂ. ಕಂಇ 299 ಬಿಎಸ್‌ಸಿ 2006 ದಿ:24.7.2009, 8.9.2009.

3) ಈ ಕಾರ್ಯಾಲಯದ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 26.9.2009 ಮತ್ತು ಪತ್ರಿಕಾ ಪ್ರಕಟಣೆ ದಿನಾಂಕ: 30.9.2009

4) ಸರ್ಕಾರದ ಆದೇಶ ಸಂ. ಆರ್‌ಡಿ 130 ಬಿಎಸ್‌ಸಿ 2007 ದಿನಾಂಕ: 19.2.2009

5) ಈ ಕಚೇರಿಯ ಸಮಸಂಖ್ಯೆಯ .ಅಂತಿಮ ಆಯ್ಕೆ ಪಟ್ಟಿ ದಿನಾಂಕ: 30.12.2009.

6) ಈ ಕಚೇರಿಯ ಸಮಸಂಖ್ಯೆಯ ಅಧಿಕೃತ ಜ್ಞಾಪನಾ ಪತ್ರ ದಿನಾಂಕ: 6.3.2010 ಮತ್ತು 25.3.2010

**"ಆಯ್ಕೆಯಾಗಿರುವ ಎಲ್ಲಾ ಅಭ್ಯರ್ಥಿಗಳಿಗೆ ಹಾರ್ದಿಕ ಅಭಿನಂದನೆಗಳು ಹಾಗೂ ಜಿಲ್ಲಾಡಳಿತದ ಪರವಾಗಿ ಸರ್ಕಾರಿ ಸೇವೆಗೆ ಆತ್ಮೀಯ ಸ್ವಾಗತ "**

ಸರ್ಕಾರದ ಉಲ್ಲೇಖ (1)ರ ಅಧಿಸೂಚನೆಯನ್ವಯ ದಾವಣಗೆರೆ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ 24 ಹುದ್ದೆಗಳಿಗೆ ಹಾಗೂ ಉಲ್ಲೇಖ (4)ರಲ್ಲಿ ದಾವಣಗೆರೆ ಜಿಲ್ಲೆಗೆ ಪ್ರತಿ ತಾಲ್ಲೂಕು ಕಚೇರಿಯ ಭೂಮಿ ಕೇಂದ್ರಗಳಿಗೆ ತಲಾ 3 ರಂತೆ 6 ತಾಲ್ಲೂಕು ಕೇಂದ್ರಗಳಿಗೆ ಮಂಜೂರಾತಿ ನೀಡಿರುವ 18 ಹುದ್ದೆಗಳಿಗೆ ಒಟ್ಟು 42 ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.

ಅದರಂತೆ, ಕರ್ನಾಟಕ ನಾಗರೀಕ ಸೇವೆ (Revenue Sub Ordinate Branch) (Cadre & Recruitment) (Amendment) ನಿಯಮಗಳು, 2009ರಲ್ಲಿ ನಿಗಧಿಪಡಿಸಿರುವ ವಿದ್ಯಾರ್ಹತೆ ಅನ್ವಯ ಮೇಲ್ಕಂಡ ಖಾಲಿ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ (3)ರ ಅಧಿಸೂಚನೆಯ ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತೆ ಮತ್ತು ಮೀಸಲಾತಿ ಅನ್ವಯ ವಿಂಗಡಿಸಿ, ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ: 30.11.2009ರಂದು ಪ್ರಕಟಿಸಲಾಯಿತು ಹಾಗೂ ಈ ಪಟ್ಟಿಯ ಬಗ್ಗೆ ಆಕ್ಷೇಪಣೆ / ತಕರಾರು ಅರ್ಜಿಗಳನ್ನು ಸಲ್ಲಿಸಲು ದಿನಾಂಕ: 14.12.2009ರವರೆಗೆ ಕಾಲಾವಕಾಶವನ್ನು ನೀಡಲಾಯಿತು.

ಪರಿಶೀಲನಾ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ದಿನಾಂಕ: 15.12.2009 ರಂದು ಪರಿಶೀಲಿಸಿ, ಮಾನ್ಯ ಕರ್ನಾಟಕ ಆಡಳಿತಾತ್ಮಕ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂ. 5887–5898/ 2009 ಪ್ರಕರಣಗಳ ಅಂತಿಮ ತೀರ್ಮಾನಕ್ಕೊಳಪಡುವ ಷರತ್ತಿನ ಮೇರೆಗೆ ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ: 30.12.2009ರಂದು ಪ್ರಕಟಿಸಲಾಯಿತು.

ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಂದ ದಿನಾಂಕ: 11.1.2010 ರಂದು ಮೂಲ ದಾಖಲಾತಿಗಳನ್ನು ಪಡೆಯಲಾಯಿತು. ಮೂಲ ದಾಖಲಾತಿಗಳನ್ನು ಹಾಜರುಪಡಿಸದೇ ಇರುವ 4 ಸಾಮಾನ್ಯ (General) ಅಭ್ಯರ್ಥಿಗಳ ಬದಲಾಗಿ ಕಾಯ್ದಿರಿಸಿದ ಪಟ್ಟಿಯಲ್ಲಿನ ಅಭ್ಯರ್ಥಿಗಳಿಂದ ದಿನಾಂಕ: 8.2.2010ರಂದು ಮೂಲ ದಾಖಲಾತಿಗಳನ್ನು ಪಡೆಯಲಾಯಿತು.

ಮೇಲ್ಕಂಡ ಅಂಶಗಳ ಅವಲೋಕನೆಯಿಂದ, ಪೋಲೀಸ್ ಪರಿಶೀಲನಾ ವರದಿ ಮತ್ತು ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಬಂದಂತಹ ಅಭ್ಯರ್ಥಿಗಳಿಗೆ ಉಲ್ಲೇಖ (6) ರಂತೆ ಈಗಾಗಲೇ ನೇಮಕಾತಿ ಆದೇಶ ನೀಡಲಾಗಿದೆ. ಮುಂದುವರೆದಂತೆ, ಪೋಲೀಸ್ ಪರಿಶೀಲನಾ ವರದಿ ಮತ್ತು ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಬಂದಂತಹ ಈ ಕೆಳಕಂಡ ಅಭ್ಯರ್ಥಿಗಳನ್ನು ಗ್ರಾಮ ಲೆಕ್ಕಾಧಿಕಾರಿಯ ಹುದ್ದೆಯ ರೂ.5800–100–6000–125–6500–150–7100–175–7800–200–8600–225–9500–250–10500 ವೇತನ ಶ್ರೇಣಿಯಲ್ಲಿ, ಅವರ ಹೆಸರಿನ ಎದುರು ನಮೂದಿಸಲ್ಪಟ್ಟ ಕಾರ್ಯಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳಿಗನುಸಾರವಾಗಿ ನೇಮಕಾತಿಗೊಳಿಸಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ ಸರ್ವಶ್ರೀ / ಶ್ರೀಮತಿ / ಕುಮಾರಿ:ಕುಮಾರ | ನೇಮಕಗೊಳಿಸಿದ ಹುದ್ದೆ ಮತ್ತು ಕಾರ್ಯಸ್ಥಳ | ಯಾರಲ್ಲಿ ಹಾಜರಾಗತಕ್ಕದ್ದು |
|---|---|---|---|
| | **ಸಾಮಾನ್ಯ ವರ್ಗ** | | |
| 1. | ಜಯಶೀಲ ವೈ. ಬಿನ್ ಕೊಟ್ರಪ್ಪ ವೈ.<br>ಚಿಕ್ಕಮೇಗಳಗೆರೆ, ಪೋತಲಕಟ್ಟೆ ಅಂಚೆ,<br>ಹರಪನಹಳ್ಳಿ ತಾಲ್ಲೂಕು | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ<br>ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್,<br>ಹೊನ್ನಾಳಿ ತಾಲ್ಲೂಕು |
| 2. | ಅಶ್ವಿನಿ ಬಿ.ಟಿ. ಬಿನ್ ತಿಮ್ಮನಗೌಡ ಬಿ.ಎಸ್.<br>ಕೆ.ಬೇವಿನಹಳ್ಳಿ ಅಂಚೆ,<br>ಹರಿಹರ ತಾಲ್ಲೂಕು | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ<br>ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್,<br>ಹೊನ್ನಾಳಿ ತಾಲ್ಲೂಕು |
| | **ಪರಿಶಿಷ್ಟ ಜಾತಿ** | | |
| 3. | ಮಾಲಾಶ್ರೀ ಎಸ್.ಬಿನ್ ಶಿವಗಾನಾಯಕ ಹೆಚ್<br>ಹೊಸನಗರ, ಕಣಿವೆಬಿಳಚಿ ಅಂಚೆ,<br>ಚನ್ನಗಿರಿ ತಾಲ್ಲೂಕು | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ<br>ಹೊನ್ನಾಳಿ ತಾಲ್ಲೂಕು | ತಹಶೀಲ್ದಾರ್,<br>ಹೊನ್ನಾಳಿ ತಾಲ್ಲೂಕು |
| 4. | ನೇತ್ರಾಬಾಯಿ ಡಿ. ಬಿನ್ ದೇವೇಂದ್ರನಾಯಕ<br>ಹೊನ್ನೂರು ಪೋಸ್ಟ್, ಗೊಲ್ಲರಹಟ್ಟಿ ವಯಾ<br>ದಾವಣಗೆರೆ ತಾಲ್ಲೂಕು | ಗ್ರಾಮ ಲೆಕ್ಕಿಗ,<br>ಭೂಮಿ ಕೇಂದ್ರ<br>ಜಗಳೂರು ತಾಲ್ಲೂಕು | ತಹಶೀಲ್ದಾರ್,<br>ಜಗಳೂರು ತಾಲ್ಲೂಕು |

ಎಲ್ಲಾ ಅಭ್ಯರ್ಥಿಗಳು ಗ್ರಾಮೀಣ ಜನರ ಸೇವೆಗೆ ಕಂಕಣಬದ್ದರಾಗಿ, ನಿಷ್ಠೆ, ಪ್ರಾಮಾಣಿಕತೆ ಹಾಗೂ ನಿಸ್ಪೃಹತೆಯಿಂದ ಕರ್ತವ್ಯ ನಿರ್ವಹಿಸಲು ತಿಳಿಸಿದೆ.

**ಷರತ್ತುಗಳು :**

1) ಈ ನೇಮಕಾತಿಯು ಮಾನ್ಯ ಕರ್ನಾಟಕ ಆಡಳಿತಾತ್ಮಕ ನ್ಯಾಯಮಂಡಳಿಯಲ್ಲಿ ದಾಖಲಿಸಿರುವ ಅರ್ಜಿ ಸಂ. 5887–5898/2009 ಪ್ರಕರಣಗಳ ಅಂತಿಮ ತೀರ್ಮಾನಕ್ಕೊಳಪಡುವ ಷರತ್ತಿಗೊಳಪಟ್ಟಿದೆ.
2) ಮೇಲ್ಕಂಡ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿನಗಳೊಳಗಾಗಿ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಈ ನೇಮಕವನ್ನು ಒಂದು ವೇಳೆ ತಿರಸ್ಕರಿಸಿದ್ದಲ್ಲಿ, ಆದೇಶ ಸ್ವೀಕರಿಸಿದ 7 ದಿನಗಳೊಳಗಾಗಿ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು.
3) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗಾಗಿ ಹಾಜರ್ ಪಡಿಸಬೇಕು 1) ಪಿಯುಸಿ ಅಂಕಪಟ್ಟಿ2) ಎಸ್‌ಎಸ್‌ಎಲ್‌ಸಿ / ಹುಟ್ಟಿದ ದಿನಾಂಕದ ದೃಢೀಕರಣ 3) ನಡತೆ ಪ್ರಮಾಣ ಪತ್ರ 4) ವೈದ್ಯಕೀಯ ಪ್ರಮಾಣ ಪತ್ರ 5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ)
4) ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ 3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗಧಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ಕೆಲಸಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲಾಗುವುದು.
5) ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡುಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲಾಗುವುದು.
6) ಅಭ್ಯರ್ಥಿಗಳು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಾತ್ಮಕವಾಗಿ ಗೊತ್ತುಪಡಿಸಿದ ನಮೂನೆಯಲ್ಲಿ **"ವಚನ"** ಸ್ವೀಕಾರ ಮಾಡತಕ್ಕದ್ದು.
7) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂ. ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005 ದಿನಾಂಕ:31.3.2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.

8) ಸರ್ಕಾರದ ಸುತ್ತೋಲೆ ಸಂ.ಕಂಇ 54 ಬಿಎಸ್‌ಸಿ 2007 ದಿನಾಂಕ: 27.3.2007ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ದಾವಣಗೆರೆ ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 5 ವರ್ಷಗಳ ಸೇವೆಯನ್ನು ಕಡ್ಡಾಯ ಪೂರೈಸತಕ್ಕದ್ದು.

9) ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ ಗುರುತಿನ ಚೀಟಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.

10) ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 : ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957 : ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ದರಾಗಿರುತ್ತಾರೆ.

11) ಇದು ನೇರನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.

12) ಗ್ರಾಮ ಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ, ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

13) ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ / ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

14) ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

15) ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

16) ಆಯ್ಕೆಯಾಗಿರುವ ಅಭ್ಯರ್ಥಿಗಳು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು. ಈ ಬಗ್ಗೆ ಒಂದು ಪ್ರಮಾಣಪತ್ರವನ್ನು (ನಮೂನೆಯಂತೆ) ನೋಟರಿಯವರಿಂದ ಪ್ರಮಾಣೀಕರಿಸಿ ಹಾಜರುಪಡಿಸಬೇಕು.

**ಕೆ. ಅಮರನಾರಾಯಣ**

ಪಿ.ಆರ್. 257

ಅಧ್ಯಕ್ಷರು, ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ
ಪ್ರಾಧಿಕಾರ ಮತ್ತು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಲೋಕೋಪಯೋಗಿ ಇಲಾಖೆ

## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು

### ಸಮಯಾವಧಿ ವಿಸ್ತರಣೆ

**ಲೋ.ಇ:ಮಂ.ವಿ:ಟಿ.ಎನ್.ಡಿ(54ಇ):2009–10:ಎಇ1, ದಿನಾಂಕ: 6ನೇ ಏಪ್ರಿಲ್ 2010**

ದಿನಾಂಕ:10.03.2010ರ 'ವಿಜಯ ಕರ್ನಾಟಕ' ಮತ್ತು 'ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್' ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟಿಫಿಕೇಶನ್ ನಂ: ಲೋ.ಇ:ಮಂ.ವಿ:ಟಿ.ಎನ್.ಡಿ(54ಇ):2009–10:ಎಇ1:ದಿನಾಂಕ: 5.03.2010ರ ಪ್ರಕಟಣೆಯ ನಬಾರ್ಡ್ ಆರ್.ಐ.ಡಿ.ಎಫ್–15ರ ಕ್ರ.ಸಂ. 1 ರಿಂದ 3 ಕಾಮಗಾರಿಗಳಿಗೆ ಆನ್‌ಲೈನ್‌ನಲ್ಲಿ ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 26.04.2010 ಎಂದು ನಿಗದಿಪಡಿಸಲಾಗಿದೆ.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿದೆ.::

ಕಾರ್ಯನಿರ್ವಾಹಕ ಇಂಜಿನಿಯರ್

ಪಿ.ಆರ್. 262

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜಿನೀಯರರು ಕಛೇರಿ, ಸಣ್ಣ ನೀರಾವರಿ ವಿಭಾಗ ಬೆಳಗಾವಿ.**

**ಅಲ್ಪಾವಧಿ ಟೆಂಡರ್ ಪ್ರಕಟಣೆ–3ನೇ ಕರೆ**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–1 ರ ಅನ್ವಯ ಗುತ್ತಿಗೆ ಆಹ್ವಾನ)**

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ/ಟೆಂಡರ್/2009–10/1238, ದಿನಾಂಕ: 12ನೇ ಏಪ್ರಿಲ್ 2010**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು “ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ” ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.
2. ದಿನಾಂಕ: 22.04.2010 ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.
3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.
4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 24.04.2010ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವದು. ಮತ್ತು ಸಾಧ್ಯವಾದಲ್ಲಿ ಅಂದೇ 16.30 ಘಂಟೆಗೆ ಅಥವಾ ಬೇರೆ ಸೂಕ್ತ ದಿನಾಂಕದಂದು ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.
5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–1)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರ್ಮ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕಾಮಗಾರಿಯನ್ನು ಪೂರ್ಣಗೊಳಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಬೆಳಗಾವಿ ಜಿಲ್ಲೆ ಬೆಳಗಾವಿ ತಾ. ಕಡೋಲಿ ಗ್ರಾಮದ ಹತ್ತಿರ ಗಂಗಾ ಕಲ್ಯಾಣ ನೀರಾವರಿ ಯೋಜನೆ. | 8.25 | 21,000/– | 1000+ tax | 2 ತಿಂಗಳು |

**ವ್ಹಿ.ಬಿ. ಕುಲಕರ್ಣಿ**

ಪಿ.ಆರ್. 259 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ

## ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ, ಚಾಮರಾಜನಗರ

**ಅಧಿಸೂಚನೆ ಸಂಖ್ಯೆ. ಎಡಿಎಮ್ಎನ್ / 1064 /2010, ದಿನಾಂಕ: 7ನೇ ಏಪ್ರಿಲ್ 2010**

**ವಿಷಯ:** ಶೀಘ್ರಲಿಪಿಗಾರರು / ಬೆರಳಚ್ಚುಗಾರರು / ಬೆರಳಚ್ಚು–ನಕಲುಗಾರರು / ಆದೇಶ ಜಾರಿಕಾರರ / ಜವಾನರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** 1. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: LCA-I/220/96 ದಿನಾಂಕ 08.03.2010ರ ಜೊತೆ ಲಗತ್ತಿಸಿರುವ ಶೆಡ್ಯೂಲ್ –IX ರಲ್ಲಿ ತೋರಿಸಿರುವಂತೆ ಹೊಸದಾಗಿ ಸೃಜಿಸಲಾಗಿರುವ 27 ಹುದ್ದೆಗಳ ನೇಮಕಾತಿಗೆ ನೀಡಲಾಗಿರುವ ಅನುಮತಿ.

2. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಅನುಮತಿ ಪತ್ರ ಸಂಖ್ಯೆ: LCA-II.164/2009 ದಿನಾಂಕ 18.03.2010.

3. ದಿನಾಂಕ 05.04.2010 ರ ಈ ಕಛೇರಿ ಟಿಪ್ಪಣಿ ಮೇಲಿನ ದಿನಾಂಕ 06.04.2010 ರ ಆದೇಶ.

ಮೇಲ್ಕಂಡ ಅಧಿಸೂಚನೆ ಅನ್ವಯ ಚಾಮರಾಜನಗರದ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು( 4 ಹುದ್ದೆಗಳು) / ಬೆರಳಚ್ಚುಗಾರರು (5 ಹುದ್ದೆಗಳು) / ಬೆರಳಚ್ಚು–ನಕಲುಗಾರರು ( 1 ಹುದ್ದೆ) / ಆದೇಶ ಜಾರಿಕಾರರ (2 ಹುದ್ದೆಗಳು) ಮತ್ತು ಜವಾನರ (4 ಹುದ್ದೆಗಳು) ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ / ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ದಿನಾಂಕಃ 12.05.2010 ರಂದು ಸಂಜೆ 5 ಘಂಟೆಯೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕಃ 12.05.2010ರ ಸಂಜೆ 5.00 ಘಂಟೆ**

**ಅರ್ಜಿ ಸಲ್ಲಿಸಬೇಕಾದ ವಿಳಾಸ :** ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,
ಚಾಮರಾಜನಗರ.

(1) **ಹುದ್ದೆಯ ಪದನಾಮ : ಶೀಘ್ರಲಿಪಿಗಾರ**

ಖಾಲಿ ಹುದ್ದೆಗಳ ಸಂಖ್ಯೆ : 04

ವೇತನ ಶ್ರೇಣಿ : 7275–175–7800–200–8600–225–9500–250–10500–300–12300–350–13350–ಇತರೆ ಭತ್ಯೆಗಳು

**ಹುದ್ದೆಗಳ ವರ್ಗೀಕರಣ** : ರೋಸ್ಟರಿನ 3 ನೇ ಬಿಂದುವಿನಿಂದ 6ನೇ ಬಿಂದುವಿನ ತನಕ.

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಒಟ್ಟು |
|---|---|---|---|---|
| ಪರಿಶಿಷ್ಟ ಪಂಗಡ | 1 | – | – | 1 |
| ಪ್ರವರ್ಗ – 1 | 1 | – | – | 1 |
| ಸಾಮಾನ್ಯ ವರ್ಗ | – | 1 | 1 | 2 |
| **ಒಟ್ಟು** | **2** | **1** | **1** | **4** |

**ಶೈಕ್ಷಣಿಕ ವಿದ್ಯಾರ್ಹತೆ:**

1) ಎಸ್ಎಸ್ಎಲ್ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (senior grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.
3) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (senior grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ :**

ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ.

**(2) ಹುದ್ದೆಯ ಪದ ನಾಮ : ಬೆರಳಚ್ಚುಗಾರರು**

ಖಾಲಿ ಹುದ್ದೆಗಳ ಸಂಖ್ಯೆ : 05

ವೇತನ ಶ್ರೇಣಿ : 5800–100–6000–125–6500–150–7100–175–7800–200–8600–225–9500–250–10500–ಇತರೆ ಭತ್ಯೆಗಳು

**ಹುದ್ದೆಗಳ ವರ್ಗೀಕರಣ** : ರೋಸ್ಟರಿನ 18ನೇ ಬಿಂದುವಿನಿಂದ 22ನೇ ಬಿಂದುವಿನ ತನಕ.

| ವರ್ಗೀಕರಣ | ಇತರೆ | ಗ್ರಾಮೀಣ | ಮಾಜಿ ಸೈನಿಕರು | ಒಟ್ಟು |
|---|---|---|---|---|
| ಪ್ರವರ್ಗ – 2(ಎ) | – | 1 | – | 1 |
| ಪ್ರವರ್ಗ – 3(ಬಿ) | 1 | – | – | 1 |
| ಸಾಮಾನ್ಯ ವರ್ಗ | 1 | 1 | 1 | 3 |
| **ಒಟ್ಟು** | **2** | **2** | **1** | **5** |

**ಶೈಕ್ಷಣಿಕ ವಿದ್ಯಾರ್ಹತೆಃ**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ :**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**(3) ಹುದ್ದೆಯ ಪದ ನಾಮ : ಬೆರಳಚ್ಚು-ನಕಲುಗಾರರು**

ಖಾಲಿ ಹುದ್ದೆಗಳ ಸಂಖ್ಯೆ : 01

ವೇತನ ಶ್ರೇಣಿ: 5800–100–6000–125–6500–150–7100–175–7800–200–8600–225–9500–250–10500– ಇತರೆ ಭತ್ಯೆಗಳು

**ಹುದ್ದೆಗಳ ವರ್ಗೀಕರಣ** : ರೋಸ್ಟರಿನ 14 ನೇ ಬಿಂದು.

| ವರ್ಗೀಕರಣ | ಇತರೆ | ಒಟ್ಟು |
|---|---|---|
| ಸಾಮಾನ್ಯ ವರ್ಗ | 1 | 1 |
| **ಒಟ್ಟು** | **1** | **1** |

**ಶೈಕ್ಷಣಿಕ ವಿದ್ಯಾರ್ಹತೆ:**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ (Junior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಅರ್ಹತಾ ಪರೀಕ್ಷೆ :**

ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತ ಲೇಖನ ನೀಡಲಾಗುವುದು.

**(4) ಹುದ್ದೆಯ ಪದ ನಾಮ : ಆದೇಶ ಜಾರಿಕಾರರು**

ಖಾಲಿ ಹುದ್ದೆಗಳ ಸಂಖ್ಯೆ : 02

ವೇತನ ಶ್ರೇಣಿ : 5500–100–6000–125–6500–150–7100–175–7800–200–8600–225–9500– ಇತರೆ ಭತ್ಯೆಗಳು

**ಹುದ್ದೆಗಳ ವರ್ಗೀಕರಣ** : ರೋಸ್ಟರಿನ 15 ನೇ ಬಿಂದುವಿನಿಂದ 16 ನೇ ಬಿಂದುವಿನವರೆಗೆ.

| ವರ್ಗೀಕರಣ | ಮಹಿಳೆ | ಗ್ರಾಮೀಣ | ಒಟ್ಟು |
|---|---|---|---|
| ಪರಿಶಿಷ್ಟ ಜಾತಿ | – | 1 | 1 |
| ಸಾಮಾನ್ಯ ವರ್ಗ | 1 | – | 1 |
| **ಒಟ್ಟು** | **1** | **1** | **2** |

**ಶೈಕ್ಷಣಿಕ ವಿದ್ಯಾರ್ಹತೆಃ**

1) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
2) ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**(5) ಹುದ್ದೆಯ ಪದ ನಾಮ : ಸೇವಕರು**

ಖಾಲಿ ಹುದ್ದೆಗಳ ಸಂಖ್ಯೆ : 04

ವೇತನ ಶ್ರೇಣಿ : 4800–100–6000–125–6500–150–7100–175–7275–ಇತರೆ ಭತ್ಯೆಗಳು

**ಹುದ್ದೆಗಳ ವರ್ಗೀಕರಣ** : ರೋಸ್ಟರಿನ 19 ನೇ ಬಿಂದುವಿನಿಂದ 22 ನೇ ಬಿಂದುವಿನ ತನಕ.

| ವರ್ಗೀಕರಣ | ಇತರೆ | ಗ್ರಾಮೀಣ | ಮಾಜಿ ಸೈನಿಕರು | ಒಟ್ಟು |
|---|---|---|---|---|
| ಪ್ರವರ್ಗ – 2(ಎ) | – | 1 | – | 1 |
| ಪ್ರವರ್ಗ – 3(ಬಿ) | 1 | – | – | 1 |
| ಸಾಮಾನ್ಯ ವರ್ಗ | 1 | – | 1 | 2 |
| **ಒಟ್ಟು** | **2** | **1** | **1** | **4** |

**ಶೈಕ್ಷಣಿಕ ವಿದ್ಯಾರ್ಹತೆ:**

1) 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣತೆ.
2) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

**ಆಯ್ಕೆ ವಿಧಾನ:**

ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಾನುಸಾರ ಆಯ್ಕೆ ಮಾಡಲಾಗುವುದು.

ಸ್ಪರ್ಧಾತ್ಮಕ ಪರೀಕ್ಷೆ : ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು.ನಕಲುಗಾರ ಹುದ್ದೆಗೆ ಅಭ್ಯರ್ಥಿಯನ್ನು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಅಯ್ಕೆ ಮಾಡಿಕೊಳ್ಳಲಾಗುವುದು.

**ಪರಿವೀಕ್ಷಣಾ ಅವಧಿ** : ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು.

**ವಯೋಮಿತಿ :**

1) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.
2) ಗರಿಷ್ಠ ವಯೋಮಿತಿ :

| | |
|---|---|
| ಸಾಮಾನ್ಯ ವರ್ಗ | 35 ವರ್ಷ ಮೀರಿರಬಾರದು |
| ಪ್ರವರ್ಗ 2ಎ, 2ಬಿ, 3ಎ, 3ಬಿ | 38 ವರ್ಷ ಮೀರಿರಬಾರದು |
| ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ / ಪ್ರವರ್ಗ – 1 | 40 ವರ್ಷ ಮೀರಿರಬಾರದು |

1. ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು (ಈ ಬಗ್ಗೆ ಮೀಸಲಾತಿ ಕೋರಿದಲ್ಲಿ ಪ್ರಮಾಣಪತ್ರ ಸಲ್ಲಿಸಬೇಕು).
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗದ ಪ್ರತಿ ಸಲ್ಲಿಸಬೇಕು.
3. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಪ್ರವರ್ಗ –1, 2ಎ, 2ಬಿ, 3ಎ, 3ಬಿ, ಗಳ ಮೀಸಲಾತಿ ಪ್ರಮಾಣಪತ್ರಗಳನ್ನು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ ಸಲ್ಲಿಸಬೇಕು. (ಮೀಸಲಾತಿ ಕೋರಿದಲ್ಲಿ)
4. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಪ್ರತಿ ಸಲ್ಲಿಸಬೇಕು. (ಮೀಸಲಾತಿ ಕೋರಿದಲ್ಲಿ)
5. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರ ಪಡೆದು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ಸಹಿ ಮಾಡಿಸಿ ಅರ್ಜಿಯೊಡನೆ ಲಗತ್ತಿಸಬೇಕು. (ಮೀಸಲಾತಿ ಕೋರಿದ್ದಲ್ಲಿ).
6. ಶಾಲಾ / ಕಾಲೇಜಿನ ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಣ ವ್ಯಕ್ತಿಗಳಿಂದ ಪಡೆದ 6ತಿಂಗಳ ಇತ್ತೀಚಿನ ಎರಡು ನಡತೆ ಪ್ರಮಾಣ ಪತ್ರಗಳ ಪ್ರತಿ ಸಲ್ಲಿಸಬೇಕು.

**ಇತರ ಸೂಚನೆಗಳು :**

1. ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.
3. ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.
4. ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಲಗತ್ತಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.
5. ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ / ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
6. ಶೀಘ್ರಲಿಪಿಗಾರ, ಬೆರಳಚ್ಚುಗಾರ ಮತ್ತು ಬೆರಳಚ್ಚು – ನಕಲುಗಾರ ಹುದ್ದೆಗಳ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿ ಅರ್ಹ ಅಭ್ಯರ್ಥಿಗಳಿಗೆ ಮಾತ್ರ 1:5 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.
7. ಜಾರಿಕಾರ ಹುದ್ದೆಯ ಅಭ್ಯರ್ಥಿಗಳಿಗೆ ಗರಿಷ್ಟ ಅಂಕ ಆಧಾರದ ಅರ್ಹತೆ ಮೇರೆಗೆ 1:25 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.
8. ಜವಾನರ ಹುದ್ದೆಯ ಅಭ್ಯರ್ಥಿಗಳಿಗೆ ಗರಿಷ್ಟ ಅಂಕ ಆಧಾರದ ಅರ್ಹತೆ ಮೇರೆಗೆ 1:10 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆ ನೀಡಲಾಗುವುದು.
9. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ಅಭ್ಯರ್ಥಿಗಳಿಗೆ ಸೂಚನೆ :**

1. ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.
2. ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಛಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.
4. ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
5. ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ 5–00 ರೂಪಾಯಿ ಅಂಚೆ ಮುದ್ರಾಂಕ (ಪೋಸ್ಟಲ್ ಸ್ಟ್ಯಾಂಪ್) ವನ್ನು ಹೊಂದಿರುವ ಸ್ವ – ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
6. ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.
7. ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.
8. ವಿವರಗಳನ್ನು ಕಾಲಂಗಳಲ್ಲಿ ಭರ್ತಿ ಮಾಡಿ ಬರೆದು ಅರ್ಜಿಗಳನ್ನು ಅಂಚೆ ಮೂಲಕ ಸಲ್ಲಿಸುವುದು ಅಥವಾ ಖುದ್ದಾಗಿ ತಂದು ಸಲ್ಲಿಸಿದಲ್ಲಿ ಈ ಕಛೇರಿಯ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

**ಸಾಮಾನ್ಯ ಸೂಚನೆ :**

1. ನೈತಿಕ ದುರ್ನಡತೆಯಿಂದಾಗಿ / ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ / ಕೇಂದ್ರ / ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ / ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ / ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.
2. ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.

3. ಅಭ್ಯರ್ಥಿಗಳ ಆಯ್ಕೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.
4. ಪಿಂಚಣಿ ಸೌಲಭ್ಯ ಃ ಸರ್ಕಾರದ ಆದೇಶ ಸಂಖ್ಯೆಃ ಎಫ್‌ಡಿ(ಎಸ್‌ಪಿಎಲ್) 04 ಪಿಟಿಐ 2005, ದಿನಾಂಕ 31.03.2006 ರಂತೆ.

**ವಿಶೇಷ ಸೂಚನೆ :**

ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಂಚೆ ಮೂಲಕ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಮಾಹಿತಿಯನ್ನು ಸಂಪೂರ್ಣವಾಗಿ ಓದಿ ತಿಳಿದುಕೊಂಡು ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ / ಗಣಕೀಕೃತ ಪ್ರತಿಯಲ್ಲಿ ಎಲ್ಲಾ ಅಂಕಣಗಳನ್ನು ನಿಗದಿತ ಉತ್ತರಗಳಿಂದ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಎ.ಸಿ. ವಿದ್ಯಾಧರ**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ.

**ಅರ್ಜಿ ನಮೂನೆ**

ಇತ್ತೀಚಿನ ಭಾವಚಿತ್ರ ಲಗತ್ತಿಸಬೇಕು

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,
ಚಾಮರಾಜನಗರ.

ಮಾನ್ಯರೇ,

ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆಃ ಎಡಿಎಂಎನ್/ ......../ 2010 ದಿನಾಂಕ 07.04.2010 ರ ಪ್ರಕಾರ ಶೀಘ್ರಲಿಪಿಗಾರರ / ಬೆರಳಚ್ಚುಗಾರರ / ಬೆರಳಚ್ಚುನಕಲುಗಾರರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | | |
|---|---|---|---|---|---|---|
| 1 | ಅಭ್ಯರ್ಥಿಯ ಹೆಸರು | | | | | |
| 2 | ತಂದೆಯ / ತಾಯಿಯ / ಗಂಡನ ಹೆಸರು | | | | | |
| 3 | ಪೂರ್ಣ ವಿಳಾಸ | | | | | |
| 4 | ಜನ್ಮ ದಿನಾಂಕ ಮತ್ತು ವಯಸ್ಸು | | | | | |
| 5 | ಲಿಂಗ | ಪುರುಷ / ಮಹಿಳೆ | | | | |
| 6 | ವಿವಾಹಿತರಾಗಿದ್ದರೆ ಗಂಡನ ಅಥವ ಹೆಂಡತಿಯ ಹೆಸರು | | | | | |
| 7 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | | | | | |
| 8 | ರಾಷ್ಟ್ರೀಯತೆ : ಜಾತಿ / ಉಪಜಾತಿ : | | | | | |
| 9 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು : (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ: | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು | |
| ಎ | ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆ | | | | | |
| ಬಿ | ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | | |

| | | | | | |
|---|---|---|---|---|---|
| ಸಿ | ಹಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಕಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಇ | ಹಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಎಫ್ | ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಜಿ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| ಹೆಚ್ | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| 10 | ಜಾತಿ / ಗ್ರಾಮೀಣ / ಮಾಜಿ ಸೈನಿಕ / ಅಂಗವಿಕಲ / ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 11 | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರೂ ವಿವರಗಳು | | | | |

**ಸೂಚನೆ :** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು .

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ / ಸಿದ್ದಳಿದ್ದೇನೆ.

ಸ್ಥಳ :

ದಿನಾಂಕ : ಅಭ್ಯರ್ಥಿಯ ಸಹಿ

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಿಗಳ ದೃಢೀಕರಣ ಪತ್ರ**

ಶ್ರೀ / ಶ್ರೀಮತಿ................................................................ ಇವರು ನಮ್ಮ ಇಲಾಖೆಯಲ್ಲಿ ದಿನಾಂಕ : .......................... ರಿಂದ ............................... ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು............................ ಹುದ್ದೆಗೆ ಅರ್ಹರಿರುತ್ತಾರೆ ಮತ್ತು ......................... ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ : ಸಹಿ :

ದಿನಾಂಕ : ಪದನಾಮ :

ಕಛೇರಿಯ ಮೊಹರು :

**ಅರ್ಜಿ ನಮೂನೆ**

ಇತ್ತೀಚಿನ ಭಾವಚಿತ್ರ ಲಗತ್ತಿಸಬೇಕು

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,
ಚಾಮರಾಜನಗರ.

ಮಾನ್ಯರೇ,

ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆಃ ಎಡಿಎಂಎನ್ / ..... / 2010 ದಿನಾಂಕ 07.04.2010 ರ ಪ್ರಕಾರ ಆದೇಶ ಜಾರಿಕಾರರ / ಜವಾನರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | |
|---|---|---|---|---|---|
| 1 | ಅಭ್ಯರ್ಥಿಯ ಹೆಸರು | | | | |
| 2 | ತಂದೆಯ / ತಾಯಿಯ / ಗಂಡನ ಹೆಸರು | | | | |
| 3 | ಪೂರ್ಣ ವಿಳಾಸ | | | | |
| 4 | ಜನ್ಮ ದಿನಾಂಕ ಮತ್ತು ವಯಸ್ಸು | | | | |
| 5 | ಲಿಂಗ | ಪುರುಷ / ಮಹಿಳೆ | | | |
| 6 | ವಿವಾಹಿತರಾಗಿದ್ದರೆ ಗಂಡನ ಅಥವ ಹೆಂಡತಿಯ ಹೆಸರು | | | | |
| 7 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | | | | |
| 8 | ರಾಷ್ಟ್ರೀಯತೆ :<br>ಜಾತಿ / ಉಪಜಾತಿ : | | | | |
| 9 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು : (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ: | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆ | | | | |
| ಬಿ | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| ಸಿ | 7 ನೇ ತರಗತಿ ಪರೀಕ್ಷೆ / (ಜವಾನರ ಹುದ್ದೆಗೆ) | | | | |
| 10 | ಜಾತಿ / ಗ್ರಾಮೀಣ / ಮಾಜಿ ಸೈನಿಕ / ಅಂಗವಿಕಲ / ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 11 | ಅರ್ಜಿದಾರರು ವಾಹನ ಚಾಲನೆಯ ಲೈಸನ್ಸ್ ಹೊಂದಿರುವವರೇ? (ಆದೇಶಿಕ ಜಾರೀಕಾರ ಹುದ್ದೆಗೆ ಮಾತ್ರ) | | | | |
| 12 | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರೂ ವಿವರಗಳು | | | | |

**ಸೂಚನೆ :** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು .

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ.

ನಾನು ಆಯ್ಕೆಗೊಂಡರೆ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ / ಸಿದ್ದಳಿದ್ದೇನೆ.

ಸ್ಥಳ :

ದಿನಾಂಕ : ಅಭ್ಯರ್ಥಿಯ ಸಹಿ

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಿಗಳ ದೃಢೀಕರಣ ಪತ್ರ**

ಶ್ರೀ / ಶ್ರೀಮತಿ........................................................................................................ ಇವರು ನಮ್ಮ ಇಲಾಖೆಯಲ್ಲಿ ದಿನಾಂಕ:.......................... ರಿಂದ ............................................. ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು ......................... ಹುದ್ದೆಗೆ ಅರ್ಹರಿರುತ್ತಾರೆ ಮತ್ತು....................................... ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ : ಸಹಿ :

ದಿನಾಂಕ : ಪದನಾಮ :

ಕಛೇರಿಯ ಮೊಹರು :

ಪಿ.ಆರ್. 254

**ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ, ಕೊಡಗು, ಮಡಿಕೇರಿ**

**ಅಧಿಸೂಚನೆ ಸಂಖ್ಯೆ : 1:2010 ದಿನಾಂಕ: 12ನೇ ಏಪ್ರಿಲ್ 2010**

**ವಿಷಯ:** ಶೀಘ್ರ ಲಿಪಿಗಾರರು, ಬೆರಳಚ್ಚುಗಾರರು, ಬೆರಳಚ್ಚು–ನಕಲುಗಾರರು, ಆದೇಶಿಕ ಜಾರಿಕಾರರು ಮತ್ತು ಜವಾನರ ಹುದ್ದೆಗಳ ನೇಮಕಾತಿ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಲಾ–144 ಎಲ್ಎಸಿ–2009 ದಿನಾಂಕಃ 06.08.2009 ಮತ್ತು 02.11.2009.
2. ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ–I 220/96( Uniform Staff Pattern) ದಿನಾಂಕಃ 26.11.2009.
3. ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ– I 220/96 ದಿನಾಂಕಃ 8.3.2010.
4. ಸರ್ಕಾರಿ ಆದೇಶ ಸಂಖ್ಯೆ: ಲಾ–155 ಎಲ್ಎಸಿ 2009 ದಿನಾಂಕಃ 03.02.2010.
5. ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ–II 164/2009 ದಿನಾಂಕಃ 18.03.2010.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ–08 ಸಹಿಮ–95 ದಿನಾಂಕ 20.06.1995.
7. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ–97 ಸೆನೆನಿ– 2002 ದಿನಾಂಕಃ 22.11.2002.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ–53 ಸೆನೆನಿ 2007 ದಿನಾಂಕಃ 04.01.2008.
9. Karnataka Subordinate Courts [Ministerial and other] Posts [Recruitment) Rules 1982.
10. Karnataka Subordinate Courts [Ministerial and other] posts (Recruitment) Amendments Rules 2007.

ಕೊಡಗು ಜಿಲ್ಲಾ ನ್ಯಾಯಾಲಯದ ವ್ಯಾಪ್ತಿಯಲ್ಲಿ ಬರುವ ನ್ಯಾಯಾಲಯಗಳಲ್ಲಿ ಖಾಲಿಯಿರುವ ವಿವಿಧ ಹುದ್ದೆಗಳಿಗೆ ಹಾಗೂ ಹೊಸದಾಗಿ ಸೃಜಿಸಲಾಗಿರುವ (**FNJPC ಅನ್ವಯ)** ಹುದ್ದೆಗಳಿಗೆ ನೇರ ನೇಮಕಾತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 22.05.2010 ಸಂಜೆಃ 5–00 ಗಂಟೆ**

ಅರ್ಜಿ ಸಲ್ಲಿಸಬೇಕಾದ ವಿಳಾಸಃ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ನ್ಯಾಯಾಲಯ,
ಕೊಡಗು, ಮಡಿಕೇರಿ.

**1. ಶೀಘ್ರ ಲಿಪಿಗಾರರು (Stenographer) – 4 ಹುದ್ದೆಗಳುಃ**

ಎ) ವೇತನ ಶ್ರೇಣಿ ರೂ.7275–175–7800–200–8600–225–9500–250–10500–300–12300–350–13350 ಮತ್ತು ಇತರ ಭತ್ಯೆಗಳು.

ಬಿ) ಹುದ್ದೆಗಳ ವರ್ಗೀಕರಣಃ

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಒಟ್ಟು |
|---|---|---|---|---|
| ಪ.ಜಾ | – | – | 1 | 1 |
| ಪ್ರವರ್ಗ–3ಎ | 1 | – | – | 1 |
| ಸಾ.ವ. | | 1 | 1 | 2 |
| **ಒಟ್ಟು** | **1** | **1** | **2** | **4** |

**ಸಿ) ಶೈಕ್ಷಣಿಕ ವಿದ್ಯಾರ್ಹತೆಃ**

i) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ii) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಪ್ರೌಢ ದರ್ಜೆ (Senior Grade) ಶೀಘ್ರಲಿಪಿ ಹಾಗೂ ಕನ್ನಡ ಮತ್ತು ಆಂಗ್ಲ ಪ್ರೌಢದರ್ಜೆ ಬೆರಳಚ್ಚು (Senior Grade) ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಡಿ) ಅರ್ಹತಾ ಪರೀಕ್ಷೆಃ**

ಅಭ್ಯರ್ಥಿಗಳಿಗೆ ನಿಮಿಷಕ್ಕೆ 120 ಪದಗಳ ವೇಗದಲ್ಲಿ 5 ನಿಮಿಷಗಳಷ್ಟು ಎರಡೂ ಭಾಷೆಗಳಲ್ಲಿ ಉಕ್ತಲೇಖನ ನೀಡಲಾಗುವುದು ಹಾಗೂ ಅದನ್ನು 45 ನಿಮಿಷಗಳ ಅವಧಿಯಲ್ಲಿ transcribe ಮಾಡಿ ಬೆರಳಚ್ಚು ಮಾಡುವುದು.

**2) ಬೆರಳಚ್ಚುಗಾರರುಃ 8 ಹುದ್ದೆಗಳು (ಒಂದು ಬ್ಯಾಕ್‌ಲಾಗ್ ಹುದ್ದೆ ಸೇರಿ)**

ಎ) ವೇತನ ಶ್ರೇಣಿಃ 5800–100–6000–125–6500–150–7100–175–7800–200–8600–225–9500–250–10500 ಹಾಗೂ ಇತರೆ ಭತ್ಯೆಗಳು.

**ಬಿ) ಹುದ್ದೆಗಳ ವರ್ಗೀಕರಣಃ**

| ವರ್ಗೀಕರಣ | ಮಹಿಳೆ | ಗ್ರಾಮೀಣ | ಮಾ.ಸೈ | ಯೊ. ನಿರಾಶ್ರಿತ | ಅಂಗವಿಕಲ | ಒಟ್ಟು |
|---|---|---|---|---|---|---|
| ಪ.ಜಾ | – | 1 | – | – | – | 1 |
| ಪ.ಪ. | 1 | – | – | – | – | 1 |
| ಪ್ರವರ್ಗ–2ಎ | – | 1 | – | – | – | 1 |
| ಪ್ರವರ್ಗ–2ಬಿ | 1 | – | – | – | – | 1 |
| ಸಾ.ವ. | 1 | – | 1 | 1 | 1 | 4 |
| **ಒಟ್ಟು** | **3** | **2** | **1** | **1** | **1** | **8** |

**ಸಿ) ಶೈಕ್ಷಣಿಕ ವಿದ್ಯಾರ್ಹತೆಃ**

i) ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ii) ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಪ್ರೌಢ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಡಿ) ಅರ್ಹತಾ ಪರೀಕ್ಷೆಃ**

ಅಭ್ಯರ್ಥಿಗಳಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**2. ಬೆರಳಚ್ಚು–ನಕಲುಗಾರರುಃ 3 ಹುದ್ದೆಗಳು**

ಎ) ವೇತನ ಶ್ರೇಣಿಃ 5800–100–6000–125–6500–150–7100–175–7800–200–8600–225–9500–250–10500 ಹಾಗೂ ಇತರೆ ಭತ್ಯೆಗಳು.

**ಬಿ) ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಮಹಿಳೆ | ಗ್ರಾಮೀಣ | ಅಂಗವಿಕಲ | ಒಟ್ಟು |
|---|---|---|---|---|
| ಪ್ರವರ್ಗ–2ಎ | – | – | 1 | 1 |
| ಸಾ.ವ. | 1 | 1 | – | 2 |
| **ಒಟ್ಟು** | **1** | **1** | **1** | **3** |

**ಸಿ) ಶೈಕ್ಷಣಿಕ ವಿದ್ಯಾರ್ಹತೆ:**

i) ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

ii) ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಕಿರಿಯ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಡಿ) ಅರ್ಹತಾ ಪರೀಕ್ಷೆ:**

ಅಭ್ಯರ್ಥಿಗಳಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**3. ಆದೇಶಿಕ ಜಾರಿಕಾರರು: 8 ಹುದ್ದೆಗಳು:**

ಎ) ವೇತನ ಶ್ರೇಣಿ: 5200–100–6000–125–6500–150–7100–175–7800–200–8200 ಹಾಗೂ ಇತರೆ ಭತ್ಯೆಗಳು.

ಬಿ) ಹುದ್ದೆಗಳ ವರ್ಗೀಕರಣ:

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಕಮಅ | ಅಂಗವಿಕಲ | ಒಟ್ಟು |
|---|---|---|---|---|---|---|
| ಪ.ಜಾ | – | 1 | – | – | 1 | 2 |
| ಪ್ರವರ್ಗ–2ಎ | – | – | 1 | – | 1 | 2 |
| ಸಾ.ವ. | 1 | 1 | 1 | 1 | – | 4 |
| **ಒಟ್ಟು** | **1** | **2** | **2** | **1** | **2** | **8** |

**ಸಿ) ಶೈಕ್ಷಣಿಕ ವಿದ್ಯಾರ್ಹತೆ:**

ಅ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್ ಎಸ್ ಎಲ್ ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಆ) ಡ್ರೈವಿಂಗ್ ಲೈಸೆನ್ಸನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**4. ಜವಾನರು: 7 ಹುದ್ದೆಗಳು:**

ಎ) ವೇತನಶ್ರೇಣಿ: 4800–100–6000–125–6500–150–7100–175–7275 ಹಾಗೂ ಇತರ ಭತ್ಯೆಗಳು.

ಬಿ) ಹುದ್ದೆಗಳ ವರ್ಗೀಕರಣ:

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಒಟ್ಟು |
|---|---|---|---|---|
| ಪ.ಜಾ | – | 1 | 1 | 2 |
| ಪ್ರವರ್ಗ–2ಎ | – | 1 | 1 | 2 |
| ಸಾ.ವ. | 1 | 1 | 1 | 3 |
| **ಒಟ್ಟು** | **1** | **3** | **3** | **7** |

**ಸಿ) ಶೈಕ್ಷಣಿಕ ವಿದ್ಯಾರ್ಹತೆ:**

i) ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

(ಏಳನೇ ತರಗತಿಯ ಅಂಕಪಟ್ಟಿಯನ್ನು ಕಡ್ಡಾಯವಾಗಿ ಲಗತ್ತಿಸಬೇಕು. ಅಂಕಪಟ್ಟಿ ಇಲ್ಲದ ಅರ್ಜಿಯನ್ನು ತಿರಸ್ಕರಿಸಲಾಗುವುದು)

ii) ಕನ್ನಡ ಓದಲು ಬರೆಯಲು ತಿಳಿದಿರಬೇಕು.

**I ವಯೋಮಿತಿ:–**

ಅ) ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ) **ಗರಿಷ್ಟ ವಯೋಮಿತಿ :**

ಸಾಮಾನ್ಯ ಅಭ್ಯರ್ಥಿಗಳಿಗೆ 35 ವರ್ಷಗಳು

ಪ್ರವರ್ಗ–1, 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳಿಗೆ 38 ವರ್ಷಗಳು

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಅಭ್ಯರ್ಥಿಗಳಿಗೆ 40 ವರ್ಷಗಳು

ಇ) ಮಾಜಿ ಸೈನಿಕರಿಗೆ, ವಿಧವೆಯರಿಗೆ ಮತ್ತು ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

ಈ) ಜನ್ಮ ದಿನಾಂಕವನ್ನು ತೋರಿಸುವ ಬಗ್ಗೆ ದೃಢೀಕರಿಸಿದ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.

II. ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರುಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು.

ಅ) ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿ ಹೊಂದಿದ ಬಗೆಗಿನ ಪ್ರಮಾಣಪತ್ರ.

ಆ) ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಯಲ್ಲಿ ತಹಶೀಲ್ದಾರರಿಂದ ಪಡೆದಿರುವ ಪ್ರಮಾಣಪತ್ರ.

ಇ) ಗ್ರಾಮೀಣ ಮೀಸಲಾತಿ ಪ್ರಮಾಣಪತ್ರ ನಮೂನೆ–1 ಮತ್ತು 2 ರಲ್ಲಿ

ಈ) ಅಂಗವಿಕಲ ಅಭ್ಯರ್ಥಿಗಳು ನಿಗಧಿಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣಪತ್ರ. (ಶೇಕಡಾ 40ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಮೀಸಲಾತಿಯನ್ನು ಕೋರಲು ಅರ್ಹರು)

**III ಆಯ್ಕೆ ವಿಧಾನ :**

ಅ) ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ (ನೇಮಕಾತಿ) (ತಿದ್ದುಪಡಿ) ನಿಯಮ 2007ರ ಪ್ರಕಾರ ನಡೆಸಲಾಗುವುದು.

ಆ) ಯಾವುದೇ ವರ್ಗಗಳ ಮಹಿಳಾ, ಗ್ರಾಮೀಣ, ಅಂಗವಿಕಲ ಅಥವಾ ಮಾಜಿ ಸೈನಿಕ ಮೀಸಲಾತಿ ಇರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದ ಪಕ್ಷದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗಗಳ ಅರ್ಹ ಇತರ ಅಭ್ಯರ್ಥಿಗಳಿಂದ ತುಂಬಿಕೊಳ್ಳಲಾಗುವುದು.

**IV ಸೂಚನೆಗಳು :–**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತೀಕರಿಸಿದ ನಿಗಧಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.
2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸ ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗಧಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿತಕ್ಕದ್ದು.
3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.
4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣಪತ್ರಗಳನ್ನು **ಪತ್ರಾಂಕಿತ ಅಧಿಕಾರಿಗಳಿಂದ** ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲಪ್ರತಿಗಳನ್ನು ಲಗತ್ತೀಕರಿಸುವ ಅವಶ್ಯಕತೆಯಿರುವುದಿಲ್ಲ. ಲಗತ್ತೀಕರಿಸಿದ ಪ್ರಮಾಣಪತ್ರಗಳನ್ನು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.
5) ಮೀಸಲಾತಿ ಹಾಗೂ ವಯೋಮಿತಿ ಸಡಿಲಿಕೆ ಕೋರಿರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಯಲ್ಲಿಯೇ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
6) ಗ್ರಾಮೀಣ ಮೀಸಲಾತಿ ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆ 1 ಮತ್ತು 2ರಲ್ಲಿ ಸಂಬಂಧಪಟ್ಟ ಬಿ.ಇ.ಓ ರವರಿಂದ ಮೇಲು ಸಹಿ ಮಾಡಿದ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
7) ಜವಾನ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಏಳನೇ ತರಗತಿಯ ಅಂಕಪಟ್ಟಿಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಪಡೆದು ಹಾಜರು ಪಡಿಸತಕ್ಕದ್ದು. ಅಂಕಪಟ್ಟಿಯು ಜನ್ಮ ದಿನಾಂಕದ ವಿವರಗಳನ್ನು ಒಳಗೊಂಡಿರತಕ್ಕದ್ದು.
8) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯನ್ನು ತಮ್ಮ ಮೇಲಧಿಕಾರಿಗಳಿಂದ ದೃಢೀಕರಿಸಿದ ಅನುಮತಿ ಪತ್ರದೊಂದಿಗೆ ಸಲ್ಲಿಸತಕ್ಕದ್ದು.
9) ಅರ್ಜಿಯನ್ನು ಕಳುಹಿಸುವ ಲಕೋಟೆಯ ಮೇಲೆ ದಪ್ಪ ಅಕ್ಷರಗಳಲ್ಲಿ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರನ್ನು ನಮೂದಿಸಿರಬೇಕು.

**ಕನ್ನಡ ಮಾಧ್ಯಮ ಅಭ್ಯರ್ಥಿಗಳು** ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿ.ಪಿಎಆರ್:71:ಎಸ್ ಆರ್‌ಆರ್: 2001 ದಿನಾಂಕ: 24–10–2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ (9) (1) (ಸಿ) ರ ಅನ್ವಯ ಅಭ್ಯರ್ಥಿಯು 1 ರಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರ ಪಡೆದಿರಬೇಕು.

**ಲಗತ್ತಿಸಬೇಕಾದ ದಾಖಲೆಗಳು (ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳನ್ನು ಹೊರತುಪಡಿಸಿ) (ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸತಕ್ಕದ್ದು).**

1) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ / ಸೆಮಿಸ್ಟರ್‌ಗಳ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳು
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆಯ ಪತ್ರ.
3) ಸೈನಿಕ ಸೇವೆಯಿಂದ ಬಿಡುಗಡೆಯಾದ ಬಗೆಗಿನ ಪ್ರಮಾಣಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
4) ಗ್ರಾಮೀಣ ಮೀಸಲಾತಿಯ ನಿಗದಿತ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ).
5) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ).
6) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ ( ಮೀಸಲಾತಿ ಕೋರಿದ್ದಲ್ಲಿ).
7) ಯೋಜನಾ ನಿರಾಶ್ರಿತರ ಬಗ್ಗೆ ಪ್ರಮಾಣಪತ್ರ ( ಮೀಸಲಾತಿ ಕೋರಿದ್ದಲ್ಲಿ).
8) ಇನ್ನಿತರ ಅನುಭವ ಪ್ರಮಾಣ ಪತ್ರಗಳು ( ಅನುಭವ ನಿಗದಿಪಡಿಸಿದ್ದಲ್ಲಿ).
9) ಪ.ಜಾ/ ಪ.ಪಂ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ಯವರು ನಿಗದಿತ ಜಾತಿ ಪ್ರಮಾಣಪತ್ರ.
10) ಅಂಗವಿಕಲರು ತಮ್ಮ ಅಂಗವಿಕಲತೆಯ ಬಗ್ಗೆ ಪ್ರಮಾಣ ಪತ್ರ.
11) ಮೂಲ ಪ್ರತಿಗಳನ್ನು ಲಗತ್ತಿಸಬಾರದು.

**ಸೂಚನೆ:**1) ಅಧೀಕ್ಷಕರು, ಪ್ರ.ದ.ಸ, ದ್ವಿ.ದ.ಸ, ಬೆರಳಚ್ಚುಗಾರ, ಹೆಡ್‌ವಾರ್ಡರ್ ಮತ್ತು ವಾರ್ಡರ್ ಹುದ್ದೆಗಳಿಗೆ ಅರ್ಜಿಗಳನ್ನು ಆನ್‌ಲೈನ್ ಮೂಲಕ ಮಾತ್ರ ಆಹ್ವಾನಿಸಲಾಗಿದ್ದು, ಈ ಕುರಿತ ವಿವರಗಳು ಮತ್ತು ಅರ್ಜಿ ನಮೂನೆಯನ್ನು ಈ ಇಲಾಖೆಯ ವೆಬ್‌ಸೈಟ್ ವಿಳಾಸ www.crckar.org ರಲ್ಲಿ ಲಭ್ಯವಿದ್ದು, ಅರ್ಜಿಗಳನ್ನು ಭರ್ತಿ ಮಾಡಿ ಸಲ್ಲಿಸುವುದು. ವಾಹನ ಚಾಲಕರು, ಜವಾನ ಮತ್ತು ಕಾವಲುಗಾರರ ಹುದ್ದೆಗಳಿಗೆ ಸಹ ಮೇಲ್ಕಂಡ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅಗತ್ಯ ದಾಖಲೆಗಳೊಂದಿಗೆ ನಿಗದಿತ ದಿನಾಂಕದೊಳಗಾಗಿ ಸಲ್ಲಿಸಬಹುದು ಅಥವಾ ದಿನಪತ್ರಿಕೆ / ಕರ್ನಾಟಕ ರಾಜ್ಯ ಪತ್ರದಲ್ಲಿ ಹೊರಡಿಸಲಾದ ಅಧಿಸೂಚನೆ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿಸಿ ಭರ್ತಿ ಮಾಡಿ ಸಲ್ಲಿಸಬಹುದಾಗಿದೆ. ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಬೇಕಾದ ವಿಳಾಸ ಕಾರ್ಯದರ್ಶಿ, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು–91, ದೂರವಾಣಿ ಸಂಖ್ಯೆ:1) 080–22748086 2) 22748087 ನ್ನು ಸಂಪರ್ಕಿಸಲು ಸೂಚಿಸಿದೆ.

**ಅರ್ಜಿಗಳನ್ನು ಸಲ್ಲಿಸುವ ಕಡೆಯ ದಿನಾಂಕ: 13–05–2010 (ಕಛೇರಿಯ ವೇಳೆಯ ಒಳಗಾಗಿ)**

ಅರ್ಜಿ ಸಲ್ಲಿಸುವ ಕಡೆಯ ದಿನಾಂಕ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೇ ಕೆಲಸದ ದಿನ ಅದೇ ವೇಳೆ ಎಂದು ಪರಿಗಣಿಸುವುದು.

ಕಾರ್ಯದರ್ಶಿ
ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು

## ಸಮಾಜ ಕಲ್ಯಾಣ ಇಲಾಖೆ
## ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು–560091
### ಸೂಚನೆಗಳು

ಕೇಂದ್ರ ಪರಿಹಾರ ಸಮಿತಿ ಮತ್ತು ಇದರ ಆಡಳಿತ ವ್ಯಾಪ್ತಿಗೊಳಪಡುವ 14 ಜಿಲ್ಲೆಗಳಲ್ಲಿರುವ ನಿರಾಶ್ರಿತರ ಪರಿಹಾರ ಕೇಂದ್ರಗಳಲ್ಲಿ ಖಾಲಿ ಇರುವ ಸಮೂಹ– 'ಬಿ' ಮತ್ತು 'ಸಿ' ವೃಂದದ ಒಟ್ಟು 70 ಹುದ್ದೆಗಳನ್ನು ನೇರ ನೇಮಕಾತಿಗಾಗಿ ಭರ್ತಿ ಮಾಡಲು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ಮತ್ತು ಕಾಲಕಾಲಕ್ಕೆ ಮಾಡಲಾದ ತಿದ್ದುಪಡಿಗಳನ್ವಯ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1) **ಅರ್ಜಿ ಸಲ್ಲಿಸುವ ವಿಧಾನ:–** ಈ ಹುದ್ದೆಗಳಿಗೆ ಆನ್–ಲೈನ್ (ON LINE) (ಎಲೆಕ್ಟ್ರಾನಿಕ್) ಮುಖಾಂತರ ಅರ್ಜಿ ಆಹ್ವಾನಿಸಲಾಗಿದೆ.

ಎ) ಶುಲ್ಕ:–

| ಅಭ್ಯರ್ಥಿಗಳು ಈ ಕೆಳಕಂಡ ವರ್ಗಗಳಿಗೆ ಸೇರಿದವರಾಗಿದ್ದರೆ ನಮೂದಿಸಿರುವಂತೆ ಅರ್ಜಿ ಶುಲ್ಕವನ್ನು ಪಾವತಿಸುವುದು. | |
|---|---|
| ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ, ಪ್ರವರ್ಗ–I ಮತ್ತು ಮಾಜಿ ಸೈನಿಕರಿಗೆ | ರೂ.225.00<br>(ಬ್ಯಾಂಕ್ ಶುಲ್ಕ ರೂ.25 ಸೇರಿ) |
| ಇತರೆ ವರ್ಗಗಳು | ರೂ.425.00<br>(ಬ್ಯಾಂಕ್ ಶುಲ್ಕ ರೂ.25 ಸೇರಿ) |

**ಟಿಪ್ಪಣಿ:** ಒಮ್ಮೆ ಪರೀಕ್ಷಾ ಶುಲ್ಕ ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ ಅಥವಾ ನೇಮಕಾತಿ ಸಮಿತಿ ನಡೆಸುವ ಇತರೇ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ಅಭ್ಯರ್ಥಿಗೆ ಅನ್ವಯಿಸುವ ಅರ್ಜಿ ಶುಲ್ಕವನ್ನು ಬ್ಯಾಂಕ್ ಚಲನ್ ಮೂಲಕ ಪಾವತಿಸತಕ್ಕದ್ದು (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ಸೂಚಿಸಲಾಗಿದೆ). ಡಿ.ಡಿ, ಪೋಸ್ಟಲ್ ಆರ್ಡರ್, ಮನಿಆರ್ಡರ್ ಗಳನ್ನು ಸ್ವೀಕರಿಸಲಾಗುವುದಿಲ್ಲ.

**ಅರ್ಜಿ ಸಲ್ಲಿಸುವ ವಿಧಾನ: ಆನ್–ಲೈನ್ ಮುಖಾಂತರ:–**

ಅಭ್ಯರ್ಥಿಯು ಕೇಂದ್ರ ಪರಿಹಾರ ಸಮಿತಿಯ ಅಧಿಕೃತ ವೆಬ್‌ಸೈಟ್ www.crckar.org ಮೂಲಕ ಅರ್ಜಿಯನ್ನು ಕಂಪ್ಯೂಟರ್ ಪರದೆಯ ಮೇಲೆ ತುಂಬಬೇಕು. ಅಭ್ಯರ್ಥಿಗಳು ನೀಡಿರುವ ವಿವರಗಳು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದು, ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ, ಅರ್ಜಿದಾರರು ಆನ್‌ಲೈನ್‌ನಲ್ಲಿ ಮುಂದುವರೆಯಲು ಸಾಧ್ಯವಾಗುತ್ತದೆ. ಅರ್ಹ ಅಭ್ಯರ್ಥಿಯು Submit ಬಟನ್ ಅನ್ನು ಒತ್ತಿದರೆ ಅರ್ಜಿ ಸಂಖ್ಯೆ ಸೃಜನೆಯಾಗುತ್ತದೆ. ಈ ಆನ್‌ಲೈನ್ ಅರ್ಜಿ ಸಂಖ್ಯೆಯನ್ನು ಅಭ್ಯರ್ಥಿಗಳು ಕಡ್ಡಾಯವಾಗಿ ಬರೆದಿಟ್ಟುಕೊಳ್ಳತಕ್ಕದ್ದು. ಭರ್ತಿ ಮಾಡಿದ ಆನ್‌ಲೈನ್ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಈ ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ. ಅರ್ಜಿ ಶುಲ್ಕವನ್ನು ಬ್ಯಾಂಕ್ ಚಲನ್ ಮೂಲಕ ಪಾವತಿಸುವುದು. ಈ ಮೊತ್ತವನ್ನು ಪಾವತಿಸುವ ಸಲುವಾಗಿ ಒಂದು ತ್ರಿಪ್ರತಿ (Triplicate) ಚಲನ್ ತಯಾರಾಗುತ್ತದೆ. ಅಭ್ಯರ್ಥಿಯು ಈ ಚಲನ್ ಅನ್ನು ಪ್ರಿಂಟ್ ಮಾಡಿಕೊಂಡು ಅದನ್ನು ತ್ರಿಪ್ರತಿಯಲ್ಲಿ ಹತ್ತಿರದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಅಥವಾ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ SBM/SBH ಬ್ಯಾಂಕ್‌ಗಳಲ್ಲಿ ರೂ.225 ಅಥವಾ ರೂ.425 (ಆಯಾ ವರ್ಗಗಳಿಗೆ ನಿಗದಿಪಡಿಸಿದಂತೆ) ತುಂಬಿ ಅಭ್ಯರ್ಥಿಯು ಚಲನ್ ಮೇಲೆ ಬ್ಯಾಂಕ್ ಶಾಖೆಯ ಮೊಹರು ಪಡೆದರೆ ಅರ್ಜಿ ಸಲ್ಲಿಸಿದಂತಾಗುತ್ತದೆ. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ದಿನಾಂಕ 14–04–2010 ರ ಬೆಳಿಗ್ಗೆ 10.00 ಗಂಟೆಯಿಂದ ದಿನಾಂಕ 13–05–2010 ರವರೆಗೆ ಬ್ಯಾಂಕ್ ವ್ಯವಹಾರದ ವೇಳೆಯಲ್ಲಿ ಮಾತ್ರ ಪಾವತಿಸತಕ್ಕದ್ದು.

ಅರ್ಜಿಗಳನ್ನು ದಿನಾಂಕ: 14–04–2010 ರಿಂದ 13–05–2010 ರ ಒಳಗಾಗಿ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

**ವಿಶೇಷ ಸೂಚನೆ:** ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ, ಸಮಸ್ಯೆ ಎದುರಾದಲ್ಲಿ ಶ್ರೀ ಮಂಜುನಾಥ್, ಮೊಬೈಲ್ ಸಂಖ್ಯೆ: 9632221448 ನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**2) ವರ್ಗವಾರು ಖಾಲಿ ಇರುವ ಹುದ್ದೆಗಳ ವಿವರಗಳು:–**

| ಕ್ರ. ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆಗಳು | ವಿದ್ಯಾರ್ಹತೆ | ವೇತನ ಶ್ರೇಣಿ | ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:08 ಸಹಿಮ:95 ದಿ:20–3–95 ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ:97 ಸೇನೆಮಿ:2002 ದಿ:21–11–2002 | | | | | | | | |
|---|---|---|---|---|---|---|---|---|---|---|---|---|---|
| | | | | | ಮೀಸ ಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂ. ವಿ | ಮಾ. ಸೈ | ಕ.ಮಾ. ಅ | ಯೋ. ನಿ | ಒಟ್ಟು |
| 1 | ಅಧೀಕ್ಷಕರು. ಗ್ರೂಪ್–ಬಿ | 4 | ಅಂಗೀಕೃತ ವಿಶ್ವವಿಧ್ಯಾಲಯ ದಿಂದ ಯಾವುದೇ ಪದವಿ ಪರೀಕ್ಷೆಯಲ್ಲಿ ಉತ್ತೀರ್ಣ ರಾಗಿರಬೇಕು ಹಾಗೂ ಎಂ.ಎಸ್.ಡಬ್ಲ್ಯೂ. ಸ್ನಾತಕೋತರ ಪದವಿ ಹೊಂದಿರ ತಕ್ಕದ್ದು. | 11,400–21,600 | ಪ.ಜಾ | 1 | – | – | – | – | – | – | **1** |
| | | | | | ಪ.ಪಂ | 1 | – | – | – | – | – | – | **1** |
| | | | | | ಸಾಮಾನ್ಯ | 1 | 1 | – | – | – | – | – | **2** |
| | | | | | **ಒಟ್ಟು** | **3** | **1** | – | – | – | – | – | **4** |

| ಕ್ರ ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆಗಳು | ವಿದ್ಯಾರ್ಹತೆ | ವೇತನ ಶ್ರೇಣಿ | ಮೀಸ ಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ | ಒಟ್ಟು |
|---|---|---|---|---|---|---|---|---|---|---|---|---|---|
| 2 | ಪ್ರಥಮ ದರ್ಜೆ ಸಹಾಯಕರು. ಗ್ರೂಪ್–ಸಿ | 4 | ಅಂಗೀಕೃತ ವಿಶ್ವವಿದ್ಯಾಲಯ ದಿಂದ ಯಾವುದೇ ಪದವಿ ಪರೀಕ್ಷೆಯಲ್ಲಿ ಉತ್ತೀರ್ಣ ರಾಗಿರ ಬೇಕು | 7,275–13,350 | ಪ.ಜಾ | 1 | – | – | – | – | – | – | **1** |
| | | | | | ಪ.ಪಂ | 1 | – | – | – | – | – | – | **1** |
| | | | | | ಸಾಮಾನ್ಯ | 1 | 1 | – | – | – | – | – | **2** |
| | | | | | **ಒಟ್ಟು** | **3** | **1** | – | – | – | – | – | **4** |

| ಕ್ರ. ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆಗಳು | ವಿದ್ಯಾರ್ಹತೆ | ವೇತನ ಶ್ರೇಣಿ | ಮೀಸ ಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ | ಒಟ್ಟು |
|---|---|---|---|---|---|---|---|---|---|---|---|---|---|
| 3 | ದ್ವಿತೀಯ ದರ್ಜೆ ಸಹಾಯಕರು. ಗ್ರೂಪ್–ಸಿ | 5 | ಎಸ್.ಎಸ್.ಎಲ್.ಸಿ ಯಲ್ಲಿ ಉತ್ತೀರ್ಣ ರಾಗಿರ ಬೇಕು | 5,800–10,500 | ಪ.ಜಾ | 1 | – | – | – | – | – | – | **1** |
| | | | | | ಪ.ಪಂ | 1 | – | – | – | – | – | – | **1** |
| | | | | | ಸಾಮಾನ್ಯ | 1 | 1 | – | – | – | – | – | **1** |
| | | | | | ಪ್ರ.ವ–1 | 1 | – | – | – | – | – | – | **2** |
| | | | | | **ಒಟ್ಟು** | **4** | **1** | – | – | – | – | – | **5** |

| ಕ್ರ. ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆಗಳು | ವಿದ್ಯಾರ್ಹತೆ | ವೇತನ ಶ್ರೇಣಿ | ಮೀಸ ಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂ.ವಿ | ಮಾ. ಸೈ | ಕ. ಮಾ.ಅ | ಯೋ. ನಿ | ಒಟ್ಟು |
|---|---|---|---|---|---|---|---|---|---|---|---|---|---|
| 4 | ಬೆರಳಚ್ಚು ಗಾರರು. ಗ್ರೂಪ್–ಸಿ | 9 | ಎಸ್.ಎಸ್.ಎಲ್.ಸಿ ಯಲ್ಲಿ ಉತ್ತೀರ್ಣ ರಾಗಿರಬೇಕು ಹಾಗೂ ಕನ್ನಡ ಮತ್ತು ಅಂಗ್ಲ ಬಾಷೆಗಳ ಸೀನಿಯರ್ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು (ಕಂಪ್ಯೂಟರ್ ಜ್ಞಾನ ಅಪೇಕ್ಷಣೀಯ). | 5,800–10,500 | ಪ.ಜಾ | 1 | 1 | | | | | | **2** |
| | | | | | ಪ.ಪಂ | 1 | | | | | | | **1** |
| | | | | | ಸಾಮಾನ್ಯ | 1 | 1 | 1 | 1 | | | | **4** |
| | | | | | ಪ್ರ.ವ–1 | 1 | | | | | | | **1** |
| | | | | | ಪ್ರ.ವ–2ಎ | 1 | | | | | | | **1** |
| | | | | | **ಒಟ್ಟು** | **5** | **2** | **1** | **1** | | | | **9** |

| ಕ್ರ. ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆಗಳು | ವಿದ್ಯಾರ್ಹತೆ | ವೇತನ ಶ್ರೇಣಿ | ಮೀಸ ಲಾತಿ | ಸಾಮಾ ನ್ಯ | ಮಹಿಳೆ | ಗ್ರಾಮೀಣ | ಅಂ. ವಿ | ಮಾ. ಸೈ | ಕ. ಮಾ. ಅ | ಯೋ. ನಿ | ಒಟ್ಟು |
|---|---|---|---|---|---|---|---|---|---|---|---|---|---|
| 5 | ಹೆಡ್–ವಾರ್ಡರ್. ಗ್ರೂಪ್–ಸಿ | 6 | ಎಸ್.ಎಸ್.ಎಲ್.ಸಿ ಯಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಅರ್ಹತಾ ಕಾಲಂನಲ್ಲಿ ಕಾಣಿಸಿದಂತೆ ದೇಹದಾರ್ಢ್ಯತೆ ಹೊಂದಿರಬೇಕು. | 5800–10,500 | ಪ.ಜಾ | 1 | – | | | | | | **1** |
| | | | | | ಪ.ಪಂ | 1 | | | | | | | **1** |
| | | | | | ಸಾಮಾನ್ಯ | 1 | 1 | 1 | | | | | **3** |
| | | | | | ಪ್ರ.ವ–1 | 1 | – | | | | | | **1** |
| | | | | | **ಒಟ್ಟು** | **4** | **1** | **1** | | | | | **6** |

| ಕ್ರ .ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆಗಳು | ವಿದ್ಯಾರ್ಹತೆ | ವೇತನ ಶ್ರೇಣಿ | ಮೀಸ ಲಾತಿ | ಸಾಮಾ ನ್ಯ | ಮಹಿಳೆ | ಗ್ರಾಮೀಣ | ಅಂ. ವಿ | ಮಾ.ಸೈ | ಕ. ಮಾ. ಅ | ಯೋ. ನಿ | ಒಟ್ಟು |
|---|---|---|---|---|---|---|---|---|---|---|---|---|---|
| 6 | ವಾರ್ಡರ್. ಗ್ರೂಪ್–ಸಿ | 42 | ಎಸ್.ಎಸ್.ಎಲ್.ಸಿ ಯಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಅರ್ಹತಾ ಕಾಲಂನಲ್ಲಿ ಕಾಣಿಸಿದಂತೆ ದೇಹದಾರ್ಢ್ಯತೆ ಹೊಂದಿರಬೇಕು. | 5200–8,200 | ಪ.ಜಾ | 3 | 2 | 2 | | | | | **7** |
| | | | | | ಪ.ಪಂ | 1 | 1 | | | | | | **2** |
| | | | | | ಸಾಮಾನ್ಯ | 6 | 6 | 5 | | 2 | 1 | 1 | **21** |
| | | | | | ಪ್ರ.ವ–1 | 1 | 1 | | | | | | **2** |
| | | | | | ಪ್ರ.ವ–2ಎ | 3 | 2 | 1 | | | | | **6** |
| | | | | | ಪ್ರ.ವ–2ಬಿ | 1 | 1 | | | | | | **2** |
| | | | | | ಪ್ರ.ವ–3ಎ | 1 | | | | | | | **1** |
| | | | | | ಪ್ರ.ವ–3ಬಿ | 1 | | | | | | | **1** |
| | | | | | **ಒಟ್ಟು** | **17** | **13** | **8** | | **2** | **1** | **1** | **42** |

**ಟಿಪ್ಪಣಿ:**1) ಗ್ರಾಮೀಣ, ಮಾಜಿಸೈನಿಕರು, ಯೋಜನೆಗಳಿಂದ ನಿರ್ವಸಿತರಾದ ಅಭ್ಯರ್ಥಿ ಮತ್ತು ಕನ್ನಡ ಮಾಧ್ಯಮ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಅದೇ ಪ್ರವರ್ಗದ ಇತರೆ ಅಭ್ಯರ್ಥಿಗಳಿಂದ ತುಂಬಲಾಗುವುದು.

2) ಅನುಬಂಧದಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

**ಪಿಂಚಣಿ ಸೌಲಭ್ಯ:** ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ: 31–03–2006 ರಂತೆ,

**3) ಅರ್ಹತೆಗಳು:–**

**ಎ) ಅರ್ಹತಾ ಷರತ್ತುಗಳು:**

i) ಭಾರತೀಯ ನಾಗರೀಕನಾಗಿರತಕ್ಕದ್ದು.

ii) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿ ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**4) ವಯೋಮಿತಿ:**–ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಧೀಕ್ಷಕರು ಮತ್ತು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕನಿಷ್ಠ 21 ವರ್ಷ ಮತ್ತು ದ್ವಿತೀಯ ದರ್ಜೆ ಸಹಾಯಕರು, ಬೆರಳಚ್ಚುಗಾರರು, ಹೆಡ್‌ವಾರ್ಡರ್ ಮತ್ತು ವಾರ್ಡರ್ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕನಿಷ್ಠ 18 ವರ್ಷ ಪೂರೈಸಿರತಕ್ಕದ್ದು ಮತ್ತು ಈ ಕೆಳಕಂಡಂತೆ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

| | |
|---|---|
| ಸಾಮಾನ್ಯ ವರ್ಗ | 35 ವರ್ಷಗಳು |
| ಪ್ರವರ್ಗ–2 ಎ, 2 ಬಿ, 3 ಎ, 3 ಬಿ, | 38 ವರ್ಷಗಳು |
| ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1 | 40 ವರ್ಷಗಳು |

ಅ) ಅಂಗವಿಕಲರು ಮತ್ತು ವಿಧವೆಯರಿಗೆ ವಯೋಮಿತಿಯಲ್ಲಿ 10 ವರ್ಷಗಳ ಸಡಿಲಿಕೆ ಉಂಟು. ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ:104:ಸೇನೆನಿ:2005 ದಿನಾಂಕ: 13–09–2005 ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:115:ಸೇನೆನಿ:2005 ದಿನಾಂಕ: 19–11–2005 ರಲ್ಲಿ ನಿಗದಿಪಡಿಸಿದಂತೆ ಪ್ರಮಾಣಪತ್ರವನ್ನು ತೆಗೆದಿಟ್ಟುಕೊಂಡಿರತಕ್ಕದ್ದು (ಪ್ರಮಾಣ ಪತ್ರದ ನಮೂನೆಯನ್ನು ಅನುಬಂಧದಲ್ಲಿ ಕಾಣಿಸಲಾಗಿದೆ) ಹಾಗೂ ವಿಧವೆಯರು "**ವಿಧವೆ**" ಎಂಬ ಬಗ್ಗೆ ತಹಶೀಲ್ದಾರವರಿಂದ ಪಡೆದ ಪ್ರಮಾಣಪತ್ರಗಳನ್ನು– ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರ:**

1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್‌ರಿಸರ್ವ್‌ಇಂಜಿನಿಯರಿಂಗ್‌ಫೋರ್ಸ್, ಲೋಕಸಹಾಯಕಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ ಮತ್ತು,

2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

3) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ,

**ಅಥವಾ**

ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವರು,

**ಅಥವಾ**

ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ,

**ಅಥವಾ**

ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ ನಿರ್ದಿಷ್ಟ ಅವಧಿಯನ್ನು ಪೂರೈಸಿದ, ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತಿಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:–

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು,

2) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು:–

**ವಿವರಣೆ** (1) ಕೇಂದ್ರ ಸಶಸ್ತ್ರ ದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ಮೇಲ್ಕಾಣಿಸಿದ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

ಎ) ಭಾರತ ಸರ್ಕಾರದ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: 36034: 27:84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ: 02–05–1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒ.ಇ:90:ಪೊಸಿಅ:2005 ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ.

ಬಿ) ಈ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿಗೆ ಸೇರಿದ ಬಗ್ಗೆ ಕೇಂದ್ರ ಪರಿಹಾರ ಸಮಿತಿಯ ಕಾರ್ಯದರ್ಶಿಗಳ ಕಛೇರಿಗೆ ಮಾಹಿತಿ ನೀಡತಕ್ಕದ್ದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

ಸಿ) 'ಮಾಜಿ ಯೋಧ' ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**ಸೇವಾನಿರತ ಅಭ್ಯರ್ಥಿಗಳಿಗೆ:–**

ಎ) ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿ ಮೀರಿರಬಾರದು.

ಬಿ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 40 ವರ್ಷಗಳು.

ಸಿ) ಇತರೆ ಅಭ್ಯರ್ಥಿಗಳು 35 ವರ್ಷಗಳು.

**ಮೇಲ್ಕಂಡ ಎಲ್ಲಾ ವರ್ಗಗಳಿಗೆ ವಯೋಮಿತಿ ರಿಯಾಯಿತಿ ಪಡೆಯಲ್ಲಿಚ್ಚಿಸುವ ಅಭ್ಯರ್ಥಿಗಳು ಸೂಚನೆಯನ್ನು ಎಚ್ಚರಿಕೆಯಿಂದ ಓದಿ ರಿಯಾಯಿತಿಗೆ ಅರ್ಜಿ ಸಲ್ಲಿಸತಕ್ಕದ್ದು.**

**5)ವಿದ್ಯಾರ್ಹತೆ:**

**ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನಿಗದಿಪಡಿಸಿದ ವಿದ್ಯಾರ್ಹತೆ ವಿವರಗಳು ಕೆಳಕಂಡಂತಿವೆ.**

<table>
<tr><th>ಕ್ರ.ಸಂ</th><th>ವೃಂದ</th><th>ಹುದ್ದೆಗಳು</th><th>ಸಂಖ್ಯೆ</th><th colspan="2">ನಿಗದಿಪಡಿಸಿದ ವಿದ್ಯಾರ್ಹತೆ</th></tr>
<tr><td>1</td><td>ಗ್ರೂಪ್– ಬಿ</td><td>ಅಧೀಕ್ಷಕರು</td><td>4</td><td colspan="2">ಅಂಗೀಕೃತ ವಿಶ್ವವಿದ್ಯಾಲಯದಿಂದ ಪಡೆದ ಪದವಿ ಹಾಗೂ ಎಂ.ಎಸ್.ಡಬ್ಲ್ಯೂ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿರಬೇಕು.</td></tr>
<tr><td rowspan="5">2</td><td rowspan="5">ಗ್ರೂಪ್– ಸಿ</td><td>ಪ್ರ.ದ.ಸ</td><td>4</td><td colspan="2">ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿ ಪಡೆದಿರಬೇಕು.</td></tr>
<tr><td>ದ್ವಿ.ದ.ಸ</td><td>5</td><td colspan="2">ಎಸ್.ಎಸ್.ಎಲ್.ಸಿ ಉತ್ತೀರ್ಣರಾಗಿರಬೇಕು.</td></tr>
<tr><td>ಬೆರಳಚ್ಚುಗಾರರು</td><td>9</td><td colspan="2">ಎಸ್.ಎಸ್.ಎಲ್.ಸಿ ಉತ್ತೀರ್ಣ ಮತ್ತು ಕನ್ನಡ ಮತ್ತು ಆಂಗ್ಲ ಭಾಷೆಗಳ ಸೀನಿಯರ್ ಟೈಪಿಂಗ್‌ನಲ್ಲಿ ತೇರ್ಗಡೆ ಹೊಂದಿರಬೇಕು. (ಕಂಪ್ಯೂಟರ್ ಜ್ಞಾನ ಅಪೇಕ್ಷಣೀಯ)</td></tr>
<tr><td>ಹೆಡ್ ವಾರ್ಡರ್</td><td>6</td><td>ಎಸ್.ಎಸ್.ಎಲ್.ಸಿ ತೇರ್ಗಡೆ</td><td rowspan="2">ನಿಗದಿತ ದೇಹದಾರ್ಢ್ಯತೆ ಹೊಂದಿರಬೇಕು.</td></tr>
<tr><td>ವಾರ್ಡರ್</td><td>42</td><td>ಎಸ್.ಎಸ್.ಎಲ್.ಸಿ ತೇರ್ಗಡೆ</td></tr>
</table>

**ಟಿಪ್ಪಣಿ:**

1) ಡಿಪ್ಲೊಮ ಇತ್ಯಾದಿ ವಿದ್ಯಾರ್ಹತೆಗಳು ಪದವಿಗೆ ಸಮಾನವಾಗುವುದಿಲ್ಲ. ಆದ್ದರಿಂದ ಅಧೀಕ್ಷಕರ/ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಈ ವಿದ್ಯಾರ್ಹತೆಯ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ.
2) ಮಾಜಿ ಸೈನಿಕ ಅಭ್ಯರ್ಥಿಗಳು ಸೈನ್ಯದಲ್ಲಿ ನೀಡಿದ ಪ್ರಮಾಣ ಪತ್ರವನ್ನು ನಿಗದಿತ ಕಡೆಯ ದಿನಾಂಕದೊಳಗೆ ಹೊಂದಿದ್ದರೆ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು.
3) ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆಯಾದ ಸ್ನಾತಕೋತ್ತರ ಪದವಿ, ಪದವಿ, ಎಸ್.ಎಸ್.ಎಲ್.ಸಿ ಮತ್ತು ಇನ್ನಿತರೆ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತುಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನು ಪರಿಗಣಿಸಲಾಗುವುದಿಲ್ಲ.

**6) ಸಹಿಷ್ಣುತೆ ಪರೀಕ್ಷೆ (Endurance Test) ಮತ್ತು ದೇಹದಾರ್ಢ್ಯತೆ ಪರೀಕ್ಷೆ: (ಹೆಡ್‌ವಾರ್ಡರ್ ಮತ್ತು ವಾರ್ಡ್‌ರ್ ಹುದ್ದೆಗಳಿಗೆ ಮಾತ್ರ)**

ಎ) ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಬೆಂಗಳೂರಿನಲ್ಲಿ ಮಾತ್ರ ನಡೆಸಲಾಗುವುದು. ಜುಲೈ 2010 ಅಥವಾ ನಂತರದ ತಿಂಗಳುಗಳಲ್ಲಿ ಈ ಪರೀಕ್ಷೆಗಳನ್ನು ನಡೆಸಲು ಉದ್ದೇಶಿಸಲಾಗಿದೆ. ಅಭ್ಯರ್ಥಿಯು ಓ.ಎಂ.ಆರ್. ನಲ್ಲಿ ನೀಡಿರುವ ಮಾಹಿತಿ ಮೇರೆಗೆ ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳಿಗೆ ಕರೆಯಲಾಗುವುದು. ಆದ್ದರಿಂದ ಅಭ್ಯರ್ಥಿಗಳು ಓ.ಎಂ.ಆರ್ ಅರ್ಜಿಯನ್ನು ಬಹಳ ಜಾಗರೂಕತೆಯಿಂದ ತುಂಬಬೇಕು. ಒಂದು ವೇಳೆ ಯಾವುದೇ ತಪ್ಪು/ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಂತಹ ಅಭ್ಯರ್ಥಿಯ ಅಭ್ಯರ್ಥಿತನವು ರದ್ದಾಗುತ್ತದೆ. ಇದಕ್ಕೆ ಅಭ್ಯರ್ಥಿಯೇ ಸಂಪೂರ್ಣ ಜವಾಬ್ದಾರನಾಗಿರುತ್ತಾನೆ. (ಆಯ್ಕೆ ಸಮಿತಿಯು ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಬದಲಾವಣೆ ಮಾಡುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ).

ಬಿ) ಅಭ್ಯರ್ಥಿಗಳಿಗೆ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ನೀಡಲಾಗುವುದಿಲ್ಲ. ಆದರೆ ದೈಹಿಕ ಪರೀಕ್ಷೆಯ ಕರೆ ಪತ್ರವನ್ನು ಈ ಕಛೇರಿಯ ಅಧಿಕೃತ ವೆಬ್‌ಸೈಟ್ (www.crckar.org) ನಿಂದ ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು (ಡೌನ್‌ಲೋಡ್). ಈ ಸಂಬಂಧ ಅಭ್ಯರ್ಥಿಗಳು ಈ ಕಛೇರಿಯ ಅಧಿಕೃತ ವೆಬ್‌ಸೈಟ್ (www.crckar.org)ನ್ನು ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ. ಕರೆಪತ್ರವನ್ನು ಪಡೆಯದೇ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ದೈಹಿಕ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ. ಅಭ್ಯರ್ಥಿಗಳು ದೈಹಿಕ ಪರೀಕ್ಷೆಗೆ ಬರುವಾಗ, ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

1) ಪಾಸ್‌ಪೋರ್ಟ್ (Passport),
2) ಚಾಲನಾ ಪರವಾನಗಿ ಪತ್ರ (Driving License),
3) ಪಾನ್‌ಕಾರ್ಡ್ (PAN Card),
4) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ/ ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗಿ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card),
5) ಸಾರ್ವಜನಿಕ ಬ್ಯಾಂಕುಗಳು/ ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph),
6) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph),
7) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo),
8) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಅಗಿರುವ ಆದೇಶ (Ex-servicemen's pension book / pension payment order),
9) ಎನ್.ಆರ್.ಇ.ಜಿ.ಎಸ್ ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ (Job cards with Photograph),
10) ಎಲೆಕ್ಟ್ರೋಲ್ ಫೋಟೋ ಗುರುತಿನ ಚೀಟಿ (EPIC).

ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅರ್ಜಿಯ ಪ್ರತಿಯನ್ನು ಸಹ ತರತಕ್ಕದ್ದು. ತಪ್ಪಿದಲ್ಲಿ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ. ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಅಂತಹವರನ್ನು ಅನರ್ಹಗೊಳಿಸಲಾಗುವುದು ಹಾಗೂ ಬದಲಿ ದಿನಾಂಕವನ್ನು ನೀಡಲಾಗುವುದಿಲ್ಲ.

**ಸಿ) ಸಹಿಷ್ಣುತೆ ಪರೀಕ್ಷೆ: (Endurance Test):**

ದೇಹದಾರ್ಢ್ಯತೆ ಪರೀಕ್ಷೆಗೆ ಅರ್ಹರಾಗಲು ಅಭ್ಯರ್ಥಿಗಳು ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಹಾಗೂ ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳನ್ನು ಈ ಕೆಳಗೆ ನಮೂದಿಸಿರುವ ಕ್ರಮದಲ್ಲಿಯೇ ಭಾಗವಹಿಸುವುದು ಕಡ್ಡಾಯವಾಗಿರುತ್ತದೆ. ಈ ಪರೀಕ್ಷೆಗಳಲ್ಲಿ ಭಾಗವಹಿಸುವುದನ್ನು ತಿರಸ್ಕರಿಸುವವರು/ವಿಫಲವಾಗುವವರು ಅನರ್ಹತೆಗೆ ಒಳಗಾಗುವರು. ಪ್ರತಿಯೊಂದು ಸಹಿಷ್ಣುತೆ ಪರೀಕ್ಷೆ ಮುಗಿದ ನಂತರ ನಿಗದಿತ ನಮೂನೆಗೆ ಅಭ್ಯರ್ಥಿಯು ಸಹಿ ಹಾಕಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಯು ಅನರ್ಹತೆಗೊಳಗಾಗುವರು. ಸಹಿಷ್ಣುತೆ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇವು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತದೆ.

**ಹೆಡ್‌ವಾರ್ಡರ್ ಮತ್ತು ವಾರ್ಡರ್ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕೆಳಕಾಣಿಸಿದಂತೆ ಸಹಿಷ್ಣುತೆ ಪರೀಕ್ಷೆಗಳಲ್ಲಿ ಭಾಗವಹಿಸತಕ್ಕದ್ದು.**

| | **ಪುರುಷ** | | | **ಮಹಿಳಾ/ ಮಾಜಿ ಸೈನಿಕ** | |
|---|---|---|---|---|---|
| | **ಅಂಶ (item)** | **ಅರ್ಹತಾ ಸಮಯ/ ದೂರ** | | **ಅಂಶ (item)** | **ಅರ್ಹತಾ ಸಮಯ/ ದೂರ** |
| 1 | 100 ಮೀ ಓಟ | 15 ಸೆಕೆಂಡ್‌ಗಳಲ್ಲಿ | | 100 ಮೀ ಓಟ | 18.50 ಸೆಕೆಂಡ್‌ಗಳು |
| 2 | ಎತ್ತರ ಜಿಗಿತ | 1.20 ಮೀ | | ಎತ್ತರ ಜಿಗಿತ | 0.9 ಮೀ |
| 3 | ಉದ್ದ ಜಿಗಿತ | 3.80 ಮೀ | | ಉದ್ದ ಜಿಗಿತ | 2.50 ಮೀ |
| 4 | ಗುಂಡು ಎಸೆತ 7.26 Kg | 5.60 ಮೀ | | ಗುಂಡು ಎಸೆತ 4.00 Kg | 3.75 ಮೀ |
| 5 | 800 ಮೀ ಓಟ | 2 ನಿಮಿಷ 50 ಸೆಕೆಂಡ್ಸ್ | | 200 ಮೀ ಓಟ | 40 ಸೆಕೆಂಡ್ಸ್ |

1. ಅಭ್ಯರ್ಥಿಗಳು ಮೇಲಿನ 5 ಸಹಿಷ್ಣುತೆ ಪರೀಕ್ಷೆಗಳ ಪೈಕಿ ಕನಿಷ್ಠ 3 ರಲ್ಲಿ ಉತ್ತೀರ್ಣರಾಗಬೇಕು.
2. ಸಹಿಷ್ಣುತೆ ಪರೀಕ್ಷೆಗೆ ಯಾವುದೇ ಅಂಕಗಳನ್ನು ನಿಗದಿಪಡಿಸಿರುವುದಿಲ್ಲ. ಇದು ಕೇವಲ ಅರ್ಹತಾದಾಯಕ ಪರೀಕ್ಷೆಯಾಗಿರುತ್ತದೆ.
3. ಪ್ರತಿ ಅಭ್ಯರ್ಥಿಗೆ ಎತ್ತರ ಜಿಗಿತ, ಉದ್ದ ಜಿಗಿತ ಮತ್ತು ಗುಂಡು ಎಸೆತ (Shot put) ಗಳಲ್ಲಿ 3 ಅವಕಾಶಗಳನ್ನು ಕೊಡಲಾಗುವುದು.

ಮೇಲಿನ 3 ಸಹಿಷ್ಣುತೆ ಪರೀಕ್ಷೆಗಳಲ್ಲಿ ಪಾಸಾಗದೇ ಇದ್ದಲ್ಲಿ ಅಭ್ಯರ್ಥಿಗಳನ್ನು ಅನರ್ಹಗೊಳಿಸಲಾಗುವುದು.

**ಡಿ) ದೇಹದಾರ್ಢ್ಯತೆ ಪರೀಕ್ಷೆ (ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹಗೊಂಡ ಅಭ್ಯರ್ಥಿಗಳಿಗೆ ಮಾತ್ರ):–**

**ಎಲ್ಲಾ ಅಭ್ಯರ್ಥಿ, ಮಾಜಿ ಸೈನಿಕ ಮತ್ತು ಸೇವಾ ನಿರತ ಅಭ್ಯರ್ಥಿಗಳಿಗೆ ಅನ್ವಯವಾಗುತ್ತದೆ.**

**ಅ)**

| | **ಪುರುಷ ಅಭ್ಯರ್ಥಿಗಳಿಗೆ** | | **ಮಹಿಳಾ ಅಭ್ಯರ್ಥಿಗಳಿಗೆ** |
|---|---|---|---|
| 1 | ಎತ್ತರ 168 ಸೆಂ.ಮೀ | | 157 ಸೆಂ.ಮೀ |
| 2 | ತೂಕ (ಅನ್ವಯಿಸುವುದಿಲ್ಲ) | | 45 ಕೆ.ಜಿ |
| 3 | ಎದೆಯ ಸುತ್ತಳತೆ: 5 ಸೆಂ.ಮೀ ವಿಸ್ತರಿಸಿದಾಗ 86 ಸೆಂ.ಮೀ ಗಿಂತ ಕಡಿಮೆ ಇರಬಾರದು. | | ಮಹಿಳಾ ಅಭ್ಯರ್ಥಿಗಳಿಗೆ ಅನ್ವಯಿಸುವುದಿಲ್ಲ. |

**ಆ)**

**ದೃಷ್ಟಿ ಸಾಮರ್ಥ್ಯ**

| **ದೂರದ ದೃಷ್ಟಿ** | | **ಸಮೀಪ ದೃಷ್ಟಿ** | |
|---|---|---|---|
| ಉತ್ತಮ | ಕನಿಷ್ಟ | ಉತ್ತಮ | ಕನಿಷ್ಟ |
| 6/9 | 6/9 | 0/6 | 0/8 |
| ಅಥವಾ | | | |
| 6/9 | 6/12 | 0/6 | 0/8 |

ಪ್ರತಿಯೊಂದು ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**ಸೂಚನೆ:** ಸರ್ಕಾರಿ ಜಿಲ್ಲಾ ಸರ್ಜನ್ ದರ್ಜೆಗಿಂತ ಕಡಿಮೆ ಇಲ್ಲದವರಿಂದ ದೇಹದಾರ್ಢ್ಯತೆ / ದೃಷ್ಟಿ ಸಾಮರ್ಥ್ಯದ ಕುರಿತು ಪ್ರಮಾಣಪತ್ರವನ್ನು ಪಡೆದಿರತಕ್ಕದ್ದು.

**7) ಲಿಖಿತ ಪರೀಕ್ಷೆ:**

ಎ) ಅಭ್ಯರ್ಥಿಯು ಸಹಿಷ್ಣುತೆ ಹಾಗೂ ದೇಹಧಾರ್ಢ್ಯತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾದರೆ ಮಾತ್ರ ಲಿಖಿತ ಪರೀಕ್ಷೆಗೆ ಕರೆಯಲಾಗುವುದು.

ಬಿ) ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ನೀಡಲಾಗುವುದಿಲ್ಲ. ಆದರೆ ಲಿಖಿತ ಪರೀಕ್ಷೆಯ ಕರೆಪತ್ರವನ್ನು (Admission Ticket) ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.crckar.org ರಿಂದ ಕಡ್ಡಾಯವಾಗಿ ಡೌನ್‌ಲೋಡ್ ಮಾಡಿಕೊಳ್ಳತಕ್ಕದ್ದು, ಈ ಸಂಬಂಧ ಅಭ್ಯರ್ಥಿಗಳು ಈ ಕಛೇರಿಯ ವೆಬ್‌ಸೈಟ್‌ನ್ನು ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ. ಲಿಖಿತ ಪರೀಕ್ಷೆಯು ನಡೆಯುವ ವೇಳೆ ಮತ್ತು ಸ್ಥಳವನ್ನು ಕೇಂದ್ರ ಪರಿಹಾರ ಸಮಿತಿಯ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ಲಿಖಿತ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ. ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಬರುವಾಗ ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೂ ಒಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ತರುವುದು.

1) ಪಾಸ್‌ಪೋರ್ಟ್ (Passport),
2) ಚಾಲನಾ ಪರವಾನಗಿ ಪತ್ರ (Driving License),
3) ಪಾನ್‌ಕಾರ್ಡ್ (PAN Card),
4) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ/ ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗಿ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card),
5) ಸಾರ್ವಜನಿಕ ಬ್ಯಾಂಕುಗಳು/ ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph),
6) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)
7) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo)
8) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಅಗಿರುವ ಆದೇಶ (Ex-servicemen's pension book / pension payment order)
9) ಎನ್.ಆರ್.ಇ.ಜಿ.ಎಸ್ ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ (Job cards with Photograph)
10) ಎಲೆಕ್ಟ್ರೋಲ್ ಪೋಟೋ ಗುರುತಿನ ಚೀಟಿ (EPIC)

ತಪ್ಪಿದಲ್ಲಿ ಲಿಖಿತ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.

**8) ನೇಮಕಾತಿ ವಿಧಾನ: ಲಿಖಿತ ಪರೀಕ್ಷೆಯು ಎರಡು ಪತ್ರಿಕೆಗಳಾಗಿರುತ್ತದೆ.**

**1) ಪತ್ರಿಕೆ 1 : ಸಾಮಾನ್ಯ ಜ್ಞಾನ,**

**2) ಪತ್ರಿಕೆ2: ಸಾಮಾನ್ಯ ಕನ್ನಡ**

**ಪರೀಕ್ಷೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದವತಿಯಿಂದ ನಡೆಸಲಾಗುವುದು.** ವಿಷಯಗಳು ಸಾಮಾನ್ಯ ಜ್ಞಾನ ಮತ್ತು ಸಾಮಾನ್ಯ ಕನ್ನಡ ಭಾಷೆಗೆ ಸಂಬಂದಪಟ್ಟಿದ್ದು, ಪ್ರತಿ ಪತ್ರಿಕೆಯು 100 ಅಂಕಗಳಿಗೆ 100 ನಿಮಿಷಗಳ ಕಾಲಾವಧಿ ಒಳಗೊಂಡಿರುತ್ತದೆ.

ಈ ಪರೀಕ್ಷೆಗಳು ವಸ್ತು ನಿಷ್ಠ ಬಹು ಆಯ್ಕೆ ಮಾದರಿಯದಾಗಿರುತ್ತದೆ. (Objective Multiple Choice Type)

**ಸೂಚನೆ:** ಅಭ್ಯರ್ಥಿಗಳು ಓ.ಎಂ.ಆರ್ ಶೀಟ್‌ನಲ್ಲಿ ಉತ್ತರಗಳನ್ನು ಕಪ್ಪು ಬಣ್ಣದ ಬಾಲ್ ಪಾಯಿಂಟ್ ಪೆನ್ನಿನಲ್ಲಿ ಮಾತ್ರ ಗುರುತಿಸತಕ್ಕದ್ದು. ನಿಗದಿತ ಜಾಗದಲ್ಲಿ ಪ್ರಶ್ನೆ ಪತ್ರಿಕೆ ಶ್ರೇಣಿ (ಎ.ಬಿ.ಸಿ. ಇತ್ಯಾದಿ) ಹಾಗೂ ಅಭ್ಯರ್ಥಿಯ ಅರ್ಜಿಸಂಖ್ಯೆ

ರೋಲ್‌ನಂಬರ್‌ಗಳನ್ನು ತಪ್ಪದೇ ಬರೆಯಬೇಕು. ಇದನ್ನು ಬರೆಯದಿದ್ದರೆ ಉತ್ತರಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ ಹಾಗೂ ಅಭ್ಯರ್ಥಿಯು ಆಯ್ಕೆ ಪ್ರಕ್ರಿಯೆಯಿಂದ ಹೊರಗೆ ಉಳಿಯುತ್ತಾರೆ.

1) ಅಭ್ಯರ್ಥಿಗಳು ಅರ್ಜಿ ಸಂಖ್ಯೆ, ರೋಲ್ ನಂಬರ್ ಇತ್ಯಾದಿ ಭರ್ತಿ ಮಾಡಿದ ನಂತರ ನಿಗದಿತ ಜಾಗದಲ್ಲಿ ತಪ್ಪದೇ ಸಹಿ ಮಾಡಬೇಕು.

2) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಯಲ್ಲಿ ಹಾಜರಿರತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯನ್ನು ಭರ್ತಿ ಮಾಡುವ ಬಗ್ಗೆ ಮಾರ್ಗಸೂಚನೆಗಳನ್ನು ನೀಡುವರು.

3) ಕರ್ನಾಟಕ ಪರೀಕ್ಷಾ ಮಂಡಳಿ ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ ಅಥವಾ ನಕಲು ಮಾಡುವುದು ಕಂಡು ಬಂದರೆ ಅಥವಾ ನಕಲು ಮಾಡುವ ಸಾಮಗ್ರಿಗಳನ್ನು ಹೊಂದಿದ್ದರೆ ಅಂತಹ ಅಭ್ಯರ್ಥಿಗಳನ್ನು ಮೂರು ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು.

4) ಪರೀಕ್ಷಾ ಕೇಂದ್ರದಲ್ಲಿ ಮೊಬೈಲ್‌ಫೋನ್‌ಗಳನ್ನು ನಿಷೇಧಿಸಲಾಗಿದೆ. ಪರೀಕ್ಷೆ ಬರೆಯುವಾಗ ಮೊಬೈಲ್‌ಫೋನ್‌ಗಳನ್ನು ಹೊಂದಿದ್ದರೆ ಅವರನ್ನು ಪರೀಕ್ಷೆ ಬರೆಯಲು ಅನರ್ಹಗೊಳಿಸಲಾಗುವುದು.

5) ಎಲೆಕ್ಟ್ರಾನಿಕ್ ಸಾಮಗ್ರಿಗಳಾದ ಪೇಜರ್, ಕ್ಯಾಲ್ಕ್ಯುಲೇಟರ್ ಇತ್ಯಾದಿಗಳನ್ನು ಪರೀಕ್ಷಾ ಕೊಠಡಿಗೆ ತೆಗೆದುಕೊಂಡು ಹೋಗುವುದನ್ನು ನಿಷೇಧಿಸಲಾಗಿದೆ.

**9) ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:–**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಸೂಚನೆ: ನಮೂನೆ –ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಐದು ವರ್ಷಕ್ಕಿಂತ ಹಳೆಯದಿರಬಾರದು.

**ಮೀಸಲಾತಿ ಸೌಲಭ್ಯ:** ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ ಪಡೆದು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಅಂತಿಮ ದಿನಾಂಕದ ಒಳಗಾಗಿ ಪಡೆದು ಇಟ್ಟುಕೊಂಡಿರತಕ್ಕದ್ದು ಮತ್ತು ಆಯ್ಕೆ ಪ್ರಾಧಿಕಾರವು ಯಾವುದೇ ಸಂದರ್ಭದಲ್ಲಿ ಮಾಹಿತಿ ಕೋರಿದ ಕೂಡಲೇ ಒದಗಿಸತಕ್ಕದ್ದು.

| | |
|---|---|
| **ಪ.ಜಾ/ಪ.ಪಂ,** | ಸರ್ಕಾರದ ಅಧಿಸೂಚನೆ:SWD:132:SAD97Dt:8-2-2000 ಕ್ರಮವಾಗಿ **ನಮೂನೆ–ಡಿ.** |
| **ಪ್ರವರ್ಗ–1** | ನಮೂನೆ–ಇ. |
| **ಪ್ರವರ್ಗ–2, 2 ಎ, 3ಎ, 3ಬಿ** | ಸರ್ಕಾರದ ಅಧಿಸೂಚನೆ ಸಂಖ್ಯೆ: SWD:126: BCA: Dt: 13-12-2003 (ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ ತಿದ್ದುಪಡಿ) ನಿಯಮಗಳು 2000 ರನ್ವಯ ನಮೂನೆ–ಎಫ್ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರಬೇಕು. |
| **ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು** | ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ:71: ಸೆನೆನಿ 2001 ದಿನಾಂಕ: 24–10–2002 ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ ಮತ್ತು ದೃಢೀಕೃತ ಪ್ರಮಾಣ ಪತ್ರ ಲಗತ್ತಿಸುವುದು. |
| **ಮಾಜಿ ಸೈನಿಕ ಅಭ್ಯರ್ಥಿಗಳು (ವಯೋಮಿತಿ ಸಡಿಲಿಕೆ)** | ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿ, |
| **ಕನ್ನಡ ಮಾಧ್ಯಮ ಅಭ್ಯರ್ಥಿಗಳು** | ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್: 71: ಎಸ್ ಆರ್‌ಆರ್:2001 ದಿನಾಂಕ:24–10–2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ (9) (1) (ಸಿ) ರ ಅನ್ವಯ ಅಭ್ಯರ್ಥಿಯು 1 ರಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರ ಪಡೆದಿರಬೇಕು. |

**ಗ್ರಾಮೀಣ ಮೀಸಲಾತಿ:–**

ಎ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು, ಮತ್ತು

ಬಿ) ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು ವ್ಯಾಸಂಗ ಮಾಡಿದ ಅವಧಿಯಲ್ಲಿ ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976 ರ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ, ಪ್ರದೇಶ, ಸಣ್ಣನಗರ ಪ್ರದೇಶ ಅಥವಾ ಪರಿವರ್ತನೆಯ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯಾಗಿರಬೇಕು, ಮತ್ತು

ಸಿ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ:ಸಿಆಸುಇ: 08: ಸೆನೆನಿ:2001 ದಿನಾಂಕ: 13–02–2001 ರ ಪ್ರಕಾರ ಮೇಲೆ ಪರಿಭಾಷಿಸಿದಂತೆ 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ: 96:ಸೆನೆನಿ:2005, ದಿನಾಂಕ: 10–8–2005 ರಲ್ಲಿ ನಿಗದಿಪಡಿಸಿದ ನಮೂನೆ–2 ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆಯುವುದು. (ನಮೂನೆ–1 ) (ನಾನ್ ಕ್ರೀಮಿ ಲೇಯರ್) ಮತ್ತು ನಮೂನೆ –2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯಯವಾಗಿರುತ್ತದೆ.)

ಡಿ) ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರವನ್ನು ಹೊಂದಿರದಿದ್ದಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**ಅಂಗವಿಕಲರ ಮೀಸಲಾತಿ ಬಗ್ಗೆ:–**

ಹೆಡ್‌ವಾರ್ಡರ್ ಮತ್ತು ವಾರ್ಡರ್ ಹುದ್ದೆಗಳ ಕೆಲಸ ಕಾರ್ಯಗಳು ಕಾರ್ಯಪಾಲಕ ಕೆಲಸಗಳಾಗಿವೆ ಹಾಗೂ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅಂಗವಿಕಲರು ಈ ಹುದ್ದೆಯ ಕಾರ್ಯಭಾರಗಳನ್ನು ನಿಭಾಯಿಸಲು ಸಾಧ್ಯವಾಗದ ಪ್ರಯುಕ್ತ ಈ ಹುದ್ದೆಗಳಿಗೆ ಅಂಗವಿಕಲ ಮೀಸಲಾತಿಯನ್ನು ಅನ್ವಯಿಸಿರುವುದಿಲ್ಲ. ಆದ್ದರಿಂದ, ಅಂಗವಿಕಲ ಅಭ್ಯರ್ಥಿಗಳು ಈ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಲ್ಲ.

**ಸೂಚನೆ:** ಈ ಮೇಲಿನ ಎಲ್ಲಾ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅರ್ಹತೆಯನ್ನು ಪಡೆದಿರಬೇಕು. ಪ್ರಮಾಣಪತ್ರಗಳ ನಮೂನೆಗಳನ್ನು ಅನುಬಂಧದಲ್ಲಿ ನೋಡಬಹುದು. ಪ್ರಮಾಣಪತ್ರಗಳನ್ನು ನೇಮಕಾತಿ ಪ್ರಾಧಿಕಾರ ಪರಿಶೀಲಿಸುವ ಸಂದರ್ಭದಲ್ಲಿ ತಪ್ಪದೇ ಹಾಜರುಪಡಿಸತಕ್ಕದ್ದು. ಇದಕ್ಕೆ ಹೆಚ್ಚಿನ ಕಾಲಾವಕಾಶ ನೀಡಲಾಗುವುದಿಲ್ಲ. ಅರ್ಹತೆ, ಮೀಸಲಾತಿ ಇತ್ಯಾದಿಗಳ ಬಗ್ಗೆ ಅಭ್ಯರ್ಥಿಯು ಖಾತ್ರಿಪಡಿಸಿಕೊಂಡು ಅರ್ಜಿ ಸಲ್ಲಿಸುವುದು ಅವರ ವೈಯಕ್ತಿಕ ಜವಾಬ್ದಾರಿಯಾಗಿರುತ್ತದೆ. ತಪ್ಪು ಮಾಹಿತಿ ನೀಡಿದ್ದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ.

**ಒದಗಿಸಬೇಕಾದ ದಾಖಲೆಗಳು:**

1) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ / ಸೆಮಿಸ್ಟರ್‌ಗಳ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳು,
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆಯ ಪತ್ರ.,
3) ಸೈನಿಕ ಸೇವೆಯಿಂದ ಬಿಡುಗಡೆಯಾದ ಬಗೆಗಿನ ಪ್ರಮಾಣಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ),
4) ಗ್ರಾಮೀಣ ಮೀಸಲಾತಿಯ ನಿಗದಿತ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ).
5) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ).
6) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ ( ಮೀಸಲಾತಿ ಕೋರಿದ್ದಲ್ಲಿ).
7) ಯೋಜನಾ ನಿರಾಶ್ರಿತರ ಬಗ್ಗೆ ಪ್ರಮಾಣಪತ್ರ ( ಮೀಸಲಾತಿ ಕೋರಿದ್ದಲ್ಲಿ).
8) ಪ.ಜಾ/ ಪ.ಪಂ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ಯವರು ನಿಗದಿತ ಜಾತಿ ಪ್ರಮಾಣ ಪತ್ರ..
9) ಅಂಗವಿಕಲರು ತಮ್ಮ ಅಂಗವಿಕಲತೆಯ ಬಗ್ಗೆ ಪ್ರಮಾಣ ಪತ್ರ.

**ಸೂಚನೆ:** ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹ

ಅಭ್ಯರ್ಥಿಗಳು (Non-Creamy Layer) ಪ್ರಮಾಣ ಪತ್ರವನ್ನು ಹೊಂದಿರದ್ದಿದಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**10) ಪ್ರಮುಖ ಸೂಚನೆಗಳು:**

ಅಭ್ಯರ್ಥಿಗಳು ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಕೂಡದು. ಅದರೆ ಈ ಕೆಳಕಂಡ ಪ್ರಮಾಣ ಪತ್ರಗಳನ್ನು /ದಾಖಲಾತಿಗಳನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಿಂಧುವಾಗಿರುವಂತೆ ಪಡೆದಿಟ್ಟುಕೊಂಡಿದ್ದು, ಕೇಂದ್ರ ಪರಿಹಾರ ಸಮಿತಿಯ ಆಯ್ಕೆ ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

ಎ) ನಿಗದಿಪಡಿಸಿದ ವಿದ್ಯಾರ್ಹತೆಯ ಪ್ರಮಾಣ ಪತ್ರಗಳು.

ಬಿ) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪ್ರಮಾಣ ಪತ್ರ)

ಸಿ) ಸರ್ಕಾರಿ ಇಲಾಖೆಯಲ್ಲಿ / ರಾಜ್ಯ ಸರ್ಕಾರದ / ಕೇಂದ್ರ ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ / ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಇಚ್ಛಾ ಅನುಮತಿ ಪತ್ರ.

ಡಿ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪ್ರತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.

ಇ) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರ..

ಎಫ್) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).

ಜಿ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.

ಎಚ್) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿಟ್ಟುಕೊಂಡಿರತಕ್ಕದ್ದು.

ಐ) ಸೇವಾನಿರತ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ವೃತ್ತವನ್ನು ಭರ್ತಿ ಮಾಡತಕ್ಕದ್ದು ಮತ್ತು ಅವರ ಸೇವಾ ಪ್ರಮಾಣಪತ್ರ ಹಾಗೂ ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (No objection Certificate) ಸಂಬಂದಿಸಿದ ಇಲಾಖಾ ಮುಖ್ಯಸ್ಥರಿಂದ ಪಡೆದಿಟ್ಟುಕೊಂಡಿದ್ದು, ನೇಮಕಾತಿ ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು. ತಮ್ಮ ಸದ್ಯದ ಹುದ್ದೆಗೆ ಸಂಬಂಧಿಸಿದಂತೆ ನೇಮಕಾತಿ ಪ್ರಾಧಿಕಾರದಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:** ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಜೆ) ಅಭ್ಯರ್ಥಿಗಳು ಓ.ಎಂ.ಆರ್ ಅರ್ಜಿಯನ್ನು ಭರ್ತಿ ಮಾಡುವಾಗ ಅರ್ಜಿಯ ಎಲ್ಲಾ ಕಾಲಂಗಳನ್ನು ಕಪ್ಪು ಬಣ್ಣದ ಬಾಲ್ ಪಾಯಿಂಟ್ ಪೆನ್ನಿನಿಂದ ಮಾತ್ರ ತುಂಬತಕ್ಕದ್ದು. ಅಲ್ಲದೆ ಮೀಸಲಾತಿಗಳನ್ನು ಕೋರಿದಲ್ಲಿ ಖುದ್ದಾಗಿ ಪಡೆದು ಸಲ್ಲಿಸುವ ಅರ್ಜಿಯಲ್ಲಿ ಮೀಸಲಾತಿಗಾಗಿ ನಿರ್ದಿಷ್ಟಪಡಿಸಿದ ವೃತ್ತಗಳನ್ನು ತುಂಬತಕ್ಕದ್ದು. ಮೀಸಲಾತಿಯ ವೃತ್ತಗಳಲ್ಲಿ ಖಾಲಿ ಬಿಟ್ಟಿರುವ ಅಭ್ಯರ್ಥಿಗಳ ಮೀಸಲಾತಿಯನ್ನು ಸಾಮಾನ್ಯ ಅರ್ಹತೆಯೆಂದು ಪರಿಗಣಿಸಲಾಗುವುದು. ನಿರ್ದಿಷ್ಟವಾದ ವೃತ್ತಗಳಲ್ಲಿ ಮೀಸಲಾತಿಯನ್ನು ನಮೂದಿಸದೆ ಬೇರೆ ಕಡೆ ಗುರುತು(ಶೇಡ್) ಮಾಡಿದ್ದಲ್ಲಿ ಅಂತಹವುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಕೆ) ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣದಲ್ಲಿ ಅಭ್ಯರ್ಥಿಗಳು ಲಿಖಿತ ರೂಪದಲ್ಲಿ ನೇಮಕಾತಿ ಸಮಿತಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಎಲ್)ಅಭ್ಯರ್ಥಿಗಳು ನೇಮಕಾತಿ ಸಮಿತಿಯನ್ನು ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿಯ ಜೊತೆಗೆ ಅರ್ಜಿಯ ನಕಲು ಪ್ರತಿಯನ್ನು ಕಡ್ಡಾಯವಾಗಿ ಒಳಗೊಂಡಿರಬೇಕು.

**11) ವಿಶೇಷ ಸೂಚನೆಗಳು:–**

1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಆನ್‌ಲೈನ್ ಅರ್ಜಿಯ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

2) ಅಭ್ಯರ್ಥಿಗಳು ಒಂದು ಹುದ್ದೆಗಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದಲ್ಲಿ ಯಾವ ಪರೀಕ್ಷೆ ತೆಗೆದುಕೊಳ್ಳಬೇಕು ಎಂಬ ವಿಷಯವು ಅಭ್ಯರ್ಥಿಗಳ ವಿವೇಚನೆಗೆ ಬಿಟ್ಟಿದ್ದು, ನೇಮಕಾತಿ ಪ್ರಾಧಿಕಾರವು ಯಾವುದೇ ಜವಾಬ್ದಾರಿಯನ್ನು ತೆಗೆದುಕೊಳ್ಳುವುದಿಲ್ಲ.

3) ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಬಾರದೆಂದು ಸಲಹೆ ನೀಡಲಾಗಿದೆ. ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸುವ ಬದಲು ಒಂದೇ ಅರ್ಜಿಯನ್ನು ಪಡೆದು ಜಾಗರೂಕತೆಯಿಂದ ಮತ್ತು ಎಚ್ಚರಿಕೆಯಿಂದ ಭರ್ತಿ ಮಾಡತಕ್ಕದ್ದು. ಏಕೆಂದರೆ ಒಂದಕ್ಕಿಂತ ಹೆಚ್ಚು ನೊಂದಣಿ ಸಂಖ್ಯೆಯಲ್ಲಿ ಪರೀಕ್ಷೆಗೆ ಹಾಜರಾಗಿದ್ದು ಯಾವುದೇ ಹಂತದಲ್ಲಿ ಕಂಡು ಬಂದಲ್ಲಿ ಅಂತಹ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. ಸಂಕ್ಷಿಪ್ತವಾಗಿ ತಿಳಿಸುವುದೆಂದರೆ ಒಬ್ಬ ಅಭ್ಯರ್ಥಿಯು ಒಂದು ನೊಂದಣಿ ಸಂಖ್ಯೆಗಿಂತ ಹೆಚ್ಚು ನೊಂದಣಿ ಸಂಖ್ಯೆಯನ್ನು ಪರೀಕ್ಷೆಯ ಯಾವುದೇ ಹಂತದಲ್ಲಿ ಬಳಸುವುದನ್ನು ನಿಖರವಾಗಿ ನಿಷೇಧಿಸಲಾಗಿದೆ. ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಒಂದೇ ಹೆಸರಿನಲ್ಲಿ ಸಲ್ಲಿಸಿ ಬೇರೆ ಬೇರೆ ಫೋಟೋಗಳನ್ನು ಹಚ್ಚಿ, ಸಹಿಗಳನ್ನು ಮಾಡಿ ಪರೀಕ್ಷೆಗೆ ಹಾಜರಾಗಿದ್ದು ಕಂಡು ಬಂದಲ್ಲಿ ಅಂತಹವರ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸುವುದಲ್ಲದೇ ಅವರ ಮೇಲೆ ಕಾನೂನಿನ ರೀತ್ಯಾ ಕ್ರಮವನ್ನು ಕೈಗೊಳ್ಳಲಾಗುವುದು. ಈ ವಿಚಾರದಲ್ಲಿ ನೇಮಕಾತಿ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.

4) ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳನ್ನು ಪೂರಕವಾಗಿ ಸದರಿ ದಾಖಲಾತಿ/ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸಬೇಕು. ತಪ್ಪಿದಲ್ಲಿ ಅಂತಹ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಅರ್ಜಿಯೊಂದಿಗೆ ಯಾವುದೇ ಮೂಲ ಪ್ರಮಾಣ ಪತ್ರಗಳನ್ನು ಹಾಗೂ ಪ್ರತಿಗಳನ್ನು ಸಲ್ಲಿಸುವ ಅಗತ್ಯವಿರುವುದಿಲ್ಲ. ಒಂದು ವೇಳೆ ಸಲ್ಲಿಸಿ, ಅವು ಕಳೆದು ಹೋದರೆ ನೇಮಕಾತಿ ಸಮಿತಿಯು ಜವಾಬ್ದಾರಿಯಾಗುವುದಿಲ್ಲ.

5) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಹೊಂದಿರಬೇಕು.

6) ಪರೀಕ್ಷೆಗೆ ಪ್ರವೇಶವು ಸಂಪೂರ್ಣವಾಗಿ ತಾತ್ಕಾಲಿಕವಾಗಿರುತ್ತದೆ. ಪ್ರವೇಶ ಪತ್ರ ನೀಡಿದ ಮಾತ್ರಕ್ಕೆ ನೇಮಕಾತಿ ಸಮಿತಿಯು ನಿಮ್ಮ ಅಭ್ಯರ್ಥಿತನವನ್ನು ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದಲ್ಲ.

7) ಪ್ರಶ್ನೆ ಪತ್ರಿಕೆಯಲ್ಲಿನ ಯಾವುದಾದರೂ ಪ್ರಶ್ನೆಯ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಆಯಾ ಪರೀಕ್ಷಾ ದಿನವೇ ಸಂಬಂದಿತ ಮೇಲ್ವಿಚಾರಕರ ಮುಖಾಂತರ ಅವರ ಹೆಸರು, ವಿಳಾಸ, ನೊಂದಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ನೇಮಕಾತಿ ಸಮಿತಿಗೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

8) ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಈ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗ ಸೂಚನೆಗಳನ್ನು ನೀಡುತ್ತಾರೆ.

9) ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

10) ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ / ದಾಖಾತಿಗಳನ್ನು ಸಲ್ಲಿಸಿ ನೌಕರಿ ಪಡೆಯುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ, ಅದೇ ಹಂತದಲ್ಲಿ ಅವರನ್ನು ಯಾವುದೇ ಮುನ್ಸೂಚನೆ ನೀಡದೆ ಅವರ ಅಭ್ಯರ್ಥಿತನವನ್ನು ರದ್ದುಗೊಳಿಸುವುದರ ಜೊತೆಗೆ ಅವರ ವಿರುದ್ಧ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು.

11) ಅಭ್ಯರ್ಥಿಗಳು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ಅವರು ನಿಯಮ ಮತ್ತು ವಿನಿಯಮಗಳಿಗೆ (Rules & Regulations) ಬದ್ದರಾಗಿರುತ್ತಾರೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ಅವರು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

12) ಕ.ನಾ.ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿ ನಿರ್ದಿಷ್ಟಗೊಳಿಸಿರುವಂತೆ ಆಯ್ಕೆಯಾದ ಅಭ್ಯರ್ಥಿಯು ನೇಮಕಾತಿ ಆದೇಶ ನೀಡುವ ಮುನ್ನ ಪೂರ್ಣ ಪ್ರಮಾಣದ ವೈದ್ಯಕೀಯ ಪರೀಕ್ಷೆಗೆ ಒಳಗಾಗಬೇಕಾಗುತ್ತದೆ. ವೈದ್ಯಕೀಯ ಪರೀಕ್ಷೆಯಲ್ಲಿ ವಿಫಲರಾದ ಅಭ್ಯರ್ಥಿಗಳನ್ನು ಅನರ್ಹಗೊಳಿಸಲಾಗುವುದು.

**12) ದುರ್ನಡತೆ:–**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ

ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂದು, ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅಥವಾ ಒಂದು ಕೇಂದ್ರದಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾಗಿರುವ ವಿಷಯವನ್ನು ಮರೆಮಾಚಿ ಮತ್ತೊಂದು ದೈಹಿಕ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾದರೆ ಹಾಗೂ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ/ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ ನೇಮಕಾತಿ ಸಮಿತಿ ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

ಅಭ್ಯರ್ಥಿಗಳು ನೇಮಕಾತಿಗೆ ಸಂಬಂಧಿಸಿದಂತೆ ಕೇಂದ್ರ ಪರಿಹಾರ ಸಮಿತಿಯ ಕಛೇರಿ ದೂರವಾಣಿ ಸಂಖ್ಯೆ 080–22748086, 22748087ನ್ನು ಸಂಪರ್ಕಿಸಿ ನೇಮಕಾತಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಸ್ಪಷ್ಟೀಕರಣ ಪಡೆದುಕೊಳ್ಳಬಹುದು. ಈ ದೂರವಾಣಿಯು ದಿನಾಂಕ: 14–04–2010 ರಿಂದ 13–05–2010 ರವರೆಗೆ (ರಜಾ ದಿನಗಳನ್ನು ಹೊರತುಪಡಿಸಿ) ಕಛೇರಿಯ ವೇಳೆಯಲ್ಲಿ ಲಭ್ಯವಿರುತ್ತದೆ.

ಅರ್ಜಿ ತುಂಬುವ ವಿಧಾನ ಹಾಗೂ ಹೆಚ್ಚಿನ ವಿವರಗಳು ಕೇಂದ್ರ ಪರಿಹಾರ ಸಮಿತಿಯ ಅಧಿಕೃತ ವೆಬ್‌ಸೈಟ್ www.crckar.org ನಲ್ಲಿ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ.

**ಟಿಪ್ಪಣಿ:** ಅಭ್ಯರ್ಥಿಗಳು ಪರೀಕ್ಷೆ / ದೈಹಿಕ ಪರೀಕ್ಷೆ/ ಸಹಿಷ್ಣುತೆ ಪರೀಕ್ಷೆಗಳಿಗೆ ಹಾಜರಾಗಲು ತಗಲುವ ವೆಚ್ಚವನ್ನು ಸ್ವಂತವಾಗಿ ಭರಿಸತಕ್ಕದ್ದು. ಇಲಾಖೆವತಿಯಿಂದ ಯಾವುದೇ ಪ್ರಯಾಣಭತ್ಯೆ/ ದಿನಭತ್ಯೆಗಳನ್ನು ನೀಡಲಾಗುವುದಿಲ್ಲ.

ಕಾರ್ಯದರ್ಶಿ
ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು

**ಕೇಂದ್ರ ಪರಿಹಾರ ಸಮಿತಿ,**
**(ಸಮಾಜ ಕಲ್ಯಾಣ ಇಲಾಖೆ)**
**ಮಾಗಡಿ ಮುಖ್ಯ ರಸ್ತೆ, ಬೆಂಗಳೂರು–91**
**ಅರ್ಜಿ ನಮೂನೆ**

| ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋಟ್ ಆಳತೆಯ ಭಾವಚಿತ್ರ ಅಂಟಿಸುವುದು |
|---|

ಗೆ,
**ಸದಸ್ಯ ಕಾರ್ಯದರ್ಶಿ,**
ಕೇದ್ರ ಪರಿಹಾರ ಸಮಿತಿ,
ಮಾಗಡಿ ಮುಖ್ಯ ರಸ್ತೆ,
ನಿರಾಶ್ರಿತರ ಪರಿಹಾರ ಕೇಂದ್ರದ ಅವರಣ,
ಬೆಂಗಳೂರು–91.

ಅಧಿಸೂಚನೆ ಸಂಖ್ಯೆ: ______________________ ದಿನಾಂಕ: __________ ಕ್ಕೆ ಅನುಸಾರವಾಗಿ ______________ಹುದ್ದೆಗೆ ನನ್ನ ಅರ್ಜಿಯನ್ನು ಈ ಕೆಳಗೆ ಕೇಳಿರುವ ದಾಖಲೆಯೊಂದಿಗೆ ಸಲ್ಲಿಸುತ್ತಿದ್ದೇನೆ.

ವಿಸೂ: 1) ಈ ನಮೂನೆಯಲ್ಲಿ ಕೇಳಿರುವ ಪ್ರತಿಯೊಂದು ಪ್ರಶ್ನೆಗೂ ಎ4 ಅಳತೆಯ ಹಾಳೆಯಲ್ಲಿ ಮುದ್ರಿಸಿ;

ಅ) ಅಕ್ಷರಗಳಲ್ಲಿಯೇ ಉತ್ತರಿಸಬೇಕು,

ಆ) ಕೊಟ್ಟಿರುವ ಮಾಹಿತಿಯು ಅಪೂರ್ಣವಿದ್ದಲ್ಲಿ ಅಥವಾ ದೋಷಪೂರಿತವಾಗಿದ್ದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು.

ಇ) ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸತಕ್ಕದ್ದು.

| | |
|---|---|
| 1 | ಅಭ್ಯರ್ಥಿಯ ಹೆಸರು :(ಶಾಲಾ ವರ್ಗಾವಣೆ ಪ್ರಮಾಣ ಪತ್ರದಲ್ಲಿದಂತೆ). |
| 2 | ತಂದೆ / ಗಂಡನ ಹೆಸರು : |

| | |
|---|---|
| 3 | ತಾಯಿಯ ಹೆಸರು: |
| 4 | ಜನ್ಮ ದಿನಾಂಕ: (ಶಾಲಾ ವರ್ಗಾವಣೆ ಪ್ರಮಾಣ ಪತ್ರದಲ್ಲಿದಂತೆ)(ಪ್ರತಿ ಲಗತ್ತಿಸುವುದು). |
| 5 | ವಯೋಮಿತಿ ರಿಯಾಯಿತಿ ಸೌಲಭ್ಯ ಪಡೆಯಲು ಇಚ್ಚಿಸುವಿರಾ? ಅದರ ವಿವರ ನೀಡುವುದು: |
| 6 | ಅಂಚೆ ವಿಳಾಸ: |
| 7 | ಲಿಂಗ: ಗಂಡು : ☐ ಹೆಣ್ಣು: ☐ |
| 8 | **ಅ**) ಮೀಸಲಾತಿ: (ಮೀಸಲಾತಿ ಕೋರಿದ್ದಲ್ಲಿ). (ಸಂಬಂಧಿಸಿದ ಮೀಸಲಾತಿಗೆ ( ✓ ) ಗುರುತು ಹಾಕಿರಿ).<br>1) ಪ.ಜಾ ☐ 2) ಪ.ಪಂ ☐ 3) ಪ್ರವರ್ಗ–1, ☐<br>4) ಪ್ರವರ್ಗ–2 ಎ ☐ 5) ಪ್ರವರ್ಗ–2 ಬಿ ☐ 6) ಪ್ರವರ್ಗ–3 ಎ ☐<br>6) ಪ್ರವರ್ಗ–3 ಬಿ. ☐ 7) ಸಾಮಾನ್ಯ ☐ |
| | **ಆ**) ಅಭ್ಯರ್ಥಿಯು ಈ ಕೆಳಗಿನ ಒಳಮೀಸಲಾತಿಗೆ ಸೇರಿದವರೇ ?<br>(ಸಂಬಂಧಿಸಿದ ಮೀಸಲಾತಿಗೆ ( ✓ ) ಗುರುತು ಹಾಕಿರಿ).<br>ಎ) ಮಹಿಳಾ ಅಭ್ಯರ್ಥಿ ☐ ಬಿ) ಮಾಜಿ ಸೈನಿಕ ☐<br>ಸಿ) ಅಂಗವಿಕಲ ಅಭ್ಯರ್ಥಿ ☐ ಡಿ) ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ ☐<br>ಇ) ಗ್ರಾಮೀಣ ಅಭ್ಯರ್ಥಿ ☐ ಎಫ್) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ ☐<br>**ಸೂಚನೆ**: ಮೇಲ್ಕಂಡ ಮೀಸಲಾತಿಗಳನ್ನು ಕೋರಬಯಸುವ ಅಭ್ಯರ್ಥಿಗಳು ನಿಗದಿಪಡಿಸಿದ ನಮೂನೆಯಲ್ಲಿ ಸೂಕ್ತ ಪ್ರಾಧಿಕಾರಿಗಳಿಂದ ಇತ್ತೀಚೆಗೆ ಪಡೆದುಕೊಂಡ ಪ್ರಮಾಣ ಪತ್ರದ ಪ್ರತಿಗಳನ್ನು ಲಗತ್ತಿಸುವುದು. |
| 9 | **ವಿದ್ಯಾರ್ಹತೆ: (ವಾಹನ ಚಾಲಕ, ಜವಾನ ಮತ್ತು ಕಾವಲುಗಾರ ಹುದ್ದೆಗಳಿಗೆ ಪ್ರತ್ಯೇಕ ಅರ್ಜಿ ಸಲ್ಲಿಸುವುದು.)** |

| ದಿನಾಂಕ | ತಿಂಗಳು | ವರ್ಷ |
|---|---|---|
| | | |

| ವಿದ್ಯಾರ್ಹತೆ | ಉತ್ತೀರ್ಣರಾದ ವರ್ಷ | ಪಡೆದ ಅಂಕಗಳ ವಿವರ | | | ಅಭ್ಯಸಿಸಿದ ಶಾಲೆ/ ಸಂಸ್ಥೆಯ ಹೆಸರು ಮತ್ತು ಅಂಚೆ ವಿಳಾಸ |
|---|---|---|---|---|---|
| | | ಗರಿಷ್ಟ ಅಂಕ | ಗಳಿಸಿದ ಅಂಕ | ಶೇಕಡವಾರು ಅಂಕ | |
| 7 ನೇ ತರಗತಿ ಪರೀಕ್ಷೆ | | | | | |

| | |
|---|---|
| | ಸೂಚನೆ:1) ಅಭ್ಯರ್ಥಿಯು ಕನ್ನಡ ಭಾಷೆಯನ್ನು ಓದಲು ಮತ್ತು ಬರೆಯಲು ಜ್ಞಾನ ಹೊಂದಿರುವುದು ಕಡ್ಡಾಯವಾಗಿರುತ್ತದೆ.<br>2) 7 ನೇ ತರಗತಿ ಪರೀಕ್ಷೆ ಪಾಸು ಮಾಡಿದ ಬಗ್ಗೆ ಅಂಕಪಟ್ಟಿಯ ಪ್ರತಿಯನ್ನು ಲಗತ್ತಿಸುವುದು. |
| 10 | **ಕಾವಲುಗಾರರ ಹುದ್ದೆಗೆ:– ನಿಗದಿಗೊಳಿಸಿದ ದೇಹದಾರ್ಢ್ಯತೆ:** |

| ಕ್ರ.ಸ | ಪುರುಷ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ |
|---|---|---|
| 1 | ಎತ್ತರ 168 ಸೆಂ.ಮೀ | 157 ಸೆಂ.ಮೀ |
| 2 | ಎದೆಯ ಸುತ್ತಳತೆ : 5 ಸೆಂ.ಮೀ ವಿಸ್ತರಿಸಿದಾಗ 86 ಸೆಂ.ಮೀಗಿಂತ ಕಡಿಮೆ ಇರಬಾರದು | ಅನ್ವಯಿಸುವುದಿಲ್ಲ |
| 3 | ತೂಕ : ಅನ್ವಯಿಸುವುದಿಲ್ಲ | 45 ಕೆ.ಜಿ |

**ದೃಷ್ಟಿ ಸಾಮರ್ಥ್ಯ**

| ದೂರ ದೃಷ್ಟಿ | | ಸಮೀಪ ದೃಷ್ಟಿ | |
|---|---|---|---|
| ಉತ್ತಮ | ಕನಿಷ್ಠ | ಉತ್ತಮ | ಕನಿಷ್ಠ |
| 6/9 | 6/9 | 0/6 | 0/8 |
| ಅಥವಾ | | | |
| 6/9 | 6/12 | – | – |

(ಪ್ರತಿಯೊಂದು ಕಣ್ಣು ಸಂಪೂರ್ಣ ಕ್ಷೇತ್ರದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು)

**ವಿ.ಸೂ:** ಅಧಿಸೂಚನೆಯಲ್ಲಿ ಕಾಣಿಸಿದ ಹುದ್ದೆಗಳ ಪೈಕಿ ಕಾವಲುಗಾರರ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಹೊಂದಿರಬೇಕಾಗಿದ್ದು, ಜಿಲ್ಲಾ ಸರ್ಜನ್ ಹುದ್ದೆಗಿಂತ ಕಡಿಮೆ ಇಲ್ಲದ ವೈದ್ಯಾಧಿಕಾರಿಗಳಿಂದ ಅಧಿಸೂಚನೆ ಹೊರಡಿಸಿದ ದಿನಾಂಕದ ನಂತರದಲ್ಲಿ ಪಡೆದ ಪ್ರಮಾಣ ಪತ್ರವನ್ನು ತಪ್ಪದೇ ಸಲ್ಲಿಸತಕ್ಕದ್ದು).

11 ಅಭ್ಯರ್ಥಿಗಳ ದೈಹಿಕ ಸಾಮರ್ಥ್ಯ ಪರಿಶೀಲನೆಗಾಗಿ ಕೆಳಕಾಣಿಸಿದಂತೆ ಪರೀಕ್ಷೆಗಳನ್ನು ನಿಗದಿಪಡಿಸಲಾಗಿದ್ದು, ಇವುಗಳ ಪೈಕಿ ಕನಿಷ್ಠ 3 ರಲ್ಲಿ ಉತ್ತೀರ್ಣರಾಗತಕ್ಕದ್ದು. ಅದರೆ ಸದರಿ ಪರೀಕ್ಷೆಗೆ ಯಾವುದೇ ಅಂಕಗಳನ್ನು ನಿಗದಿಪಡಿಸಿರುವುದಿಲ್ಲ. ಇದು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತದೆ.

| ಕ್ರ.ಸ | ಪುರುಷ | | ಮಹಿಳೆ | |
|---|---|---|---|---|
| | ಅಂಶ | ಅರ್ಹತಾ ಸಮಯ/ ದೂರ | ಅಂಶ | ಅರ್ಹತಾ ಸಮಯ/ ದೂರ |
| 1 | 800 ಮೀ ಓಟ | 2 ನಿಮಿಷ 50 ಸೆಕೆಂಡ್ | 200 ಮೀ ಓಟ | 40 ಸೆಕೆಂಡ್ |
| 2 | ಗುಂಡು ಎಸೆತ 7.26 ಕೆ.ಜಿ | 5.60 ಮೀಟರ್ | ಗುಂಡು ಎಸೆತ 4.00 ಕೆ.ಜಿ | 3.75 ಮೀಟರ್ |
| 3 | ಉದ್ದ ಜಿಗಿತ | 3.80 ಮೀಟರ್ | ಉದ್ದ ಜಿಗಿತ | 2.50 ಮೀಟರ್ |
| 4 | 100 ಮೀ. ಓಟ | 15 ಸೆಕೆಂಡ್ | 100 ಮೀ. ಓಟ | 18.5 ಸೆಕೆಂಡ್ |
| 5 | ಎತ್ತರ ಜಿಗಿತ | 1.20 ಮೀಟರ್ | ಎತ್ತರ ಜಿಗಿತ | 0.90 ಮೀಟರ್ |

12 ವಾಹನ ಚಾಲಕರ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಚಾಲ್ತಿಯಲ್ಲಿರುವ ಲಘು ಮತ್ತು ಬಾರಿ ವಾಹನಗಳ ಚಾಲನಾ ಪರವಾನಗಿ ಪತ್ರಗಳ ಪ್ರತಿಯನ್ನು ಲಗತ್ತಿಸತಕ್ಕದ್ದು.

13 ವಾಹನ ಚಾಲಕರ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸರ್ಕಾರಿ ಅಥವಾ ಅರೆ ಸರ್ಕಾರಿ ಸಂಸ್ಥೆಗಳಲ್ಲಿ ಎರಡು ವರ್ಷ ಸೇವೆ ಸಲ್ಲಿಸಿದ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು, ತಪ್ಪಿದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು.

| | |
|---|---|
| 14 | **ಈಗಾಗಲೇ ನೌಕರಿಯಲ್ಲಿದ್ದರೆ ಅದರ ಬಗ್ಗೆ ವಿವರಣೆ:** ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರ ಪಡೆದುಕೊಂಡು ಅದರ ಪ್ರತಿಯನ್ನು ಲಗತ್ತಿಸುವುದು. |

| ಇಲಾಖೆ/ ಸಂಸ್ಥೆಯ ಹೆಸರು | ಹುದ್ದೆಯ ಹೆಸರು | ವರ್ಷ | | ಅವಧಿ | |
|---|---|---|---|---|---|
| | | ಇಂದ | ಗೆ | ವರ್ಷ | ತಿಂಗಳು |
| | | | | | |

| | |
|---|---|
| 15 | ಅರ್ಜಿ ಶುಲ್ಕ: ನಿಗದಿಪಡಿಸಿದ ಶುಲ್ಕವನ್ನು ಸಂದಾಯ ಮಾಡಿದ ವಿವರ: |

| ಐ.ಪಿ.ಓ/ ಡಿಡಿ ಸಂಖ್ಯೆ | ದಿನಾಂಕ | ಮೊತ್ತ | ಅಂಚೆ ಕಛೇರಿ / ಬ್ಯಾಂಕ್ ವಿವರ |
|---|---|---|---|
| | | | |

**ಸೂಚನೆ:** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ/ ಪ್ರವರ್ಗ–1 ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳು ರೂ.200.00ಗಳ ಶುಲ್ಕ ಮತ್ತು ಇತರೆ ವರ್ಗದ ಅಭ್ಯರ್ಥಿಗಳು ರೂ.400.00 ಶುಲ್ಕವನ್ನು **"ಕಾರ್ಯದರ್ಶಿ, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು–91" (Secretary, CRC, Bangalore-91)** ಇವರಿಗೆ ಸಂದಾಯವಾಗುವಂತೆ ಅಧಿಸೂಚನೆ ನಂತರದ ದಿನಾಂಕಗಳಲ್ಲಿ ಖರೀದಿಸಿದ ಪೋಸ್ಟಲ್ ಆರ್ಡರ್/ ಡಿ.ಡಿ.ಗಳನ್ನು ಸಲ್ಲಿಸುವುದು.

**(ಅನ್ವಯಿಸದೇ ಇರುವುದನ್ನು ಹೊಡೆದು ಹಾಕಿ).**

**ಘೋಷಣೆ**

ಮೇಲಿನ ಅರ್ಜಿಯಲ್ಲಿ ತಿಳಿಸಿರುವ ಎಲ್ಲಾ ವಿಷಯಗಳು ನನಗೆ ತಿಳಿದಿರುವ ಮಟ್ಟಿಗೆ ಸತ್ಯವಾಗಿರುತ್ತದೆ ಎಂದು ಈ ಮೂಲಕ ಘೋಷಿಸುತ್ತೇನೆ. ನಾನು ಸೂಚನೆಗಳನ್ನು ಗಮನವಿಟ್ಟು ಓದಿದ್ದೇನೆ ಮತ್ತು ಅವುಗಳನ್ನು ಪಾಲಿಸಲು ಬದ್ಧರಾಗಿರುತ್ತೇವೆ. ನಿಯಮ 20 ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ಒಂದು ವೇಳೆ ನಾನು ಸಲ್ಲಿಸಿರುವ ಮಾಹಿತಿಗಳು ಅಸತ್ಯವಾಗಿದ್ದಲ್ಲಿ ಹುದ್ದೆಗೆ ಆಯ್ಕೆಯಾಗುವ ಮೊದಲು ಅಥವಾ ಆ ನಂತರದಲ್ಲಿ ನನ್ನ ಮೇಲೆ ಯಾವುದೇ ಕ್ರಮ ಕೈಗೊಳ್ಳಬಹುದು.

ಸ್ಥಳ : (ಅರ್ಜಿದಾರರ ಸಹಿ)

ದಿನಾಂಕ :

**ಸೂಚನೆ:** 1) ಪೂರ್ಣವಾಗಿ ಭರ್ತಿ ಮಾಡದ ಮತ್ತು ಸಹಿ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2) ಮೀಸಲಾತಿ, ಲಗತ್ತಿಸಬೇಕಾದ ಪ್ರಮಾಣಪತ್ರಗಳು ಇತ್ಯಾದಿ ಹೆಚ್ಚುವರಿ ವಿವರಗಳು ಅಗತ್ಯವಾದಲ್ಲಿ ಇಲಾಖೆಯ ವೆಬ್‌ಸೈಟ್ www.crckar.org ನ್ನು ಸಂಪರ್ಕಿಸಲು ಕೋರಿದೆ.

ಕಾರ್ಯದರ್ಶಿ

ಪಿ.ಆರ್. 268 ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು

## ಶಿಕ್ಷಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಇಡಿ 184 ಡಿಸಿಇ 2009, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2010**

ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಹುದ್ದೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಅರ್ಜಿಗಳನ್ನು ಆಹ್ವಾನಿಸಿ ನೇಮಕಾತಿ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದುದು ಸರಿಯಷ್ಟೆ. ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಪ್ರಕ್ರಿಯೆಯನ್ನು ಪೂರೈಸಿ ತದನಂತರ ಮತ್ತು ಆಯೋಗವು ಸಲ್ಲಿಸಿದ ಆಯ್ಕೆ ಪಟ್ಟಿಯಂತೆ ಈ ಕೆಳಕಂಡ ಅಭ್ಯರ್ಥಿಗಳನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಕನ್ನಡ ವಿಷಯದ ಉಪನ್ಯಾಸಕರ ಹುದ್ದೆಗಳಿಗೆ 02 ವರ್ಷಗಳ ಪರಿವೀಕ್ಷಣಾ ಅವಧಿಯ ಮೇರೆಗೆ ವೇತನ ಶ್ರೇಣಿ ರೂ.8000–275–13500ರಲ್ಲಿ ಈ ಮೂಲಕ ನೇಮಕಾತಿ ಮಾಡಲಾಗಿದೆ.

| ಕ್ರಮ ಸಂಖ್ಯೆ | ಕೆ.ಪಿ.ಎಸ್.ಸಿ. ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil |
| 1 | 08 | ರಂಗಸ್ವಾಮಿ.ಆರ್., # 1548/1, 2ನೇ ಕ್ರಾಸ್, ಅರುಂಧತಿ ಹ್ಯಾಂಡಿಕ್ರಾಫ್ಟ್ ಹತ್ತಿರ, ಸೊಪ್ಪಿನಕೇರಿ, ಮಂಡಿಮೊಹಲ್ಲಾ, ಮೈಸೂರು | NET | | | |

**ಮೇಲ್ಕಂಡ ನೇಮಕಾತಿಯು ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ.**

1. ಈ ಅಧಿಸೂಚನೆಯಲ್ಲಿರುವ ಅಭ್ಯರ್ಥಿಗೆ ಕಾಲೇಜು ಶಿಕ್ಷಣ ಆಯುಕ್ತರು ಸ್ಥಳನಿಯುಕ್ತಿ ಆದೇಶ ನೀಡುವ ಸಂಬಂಧ ಕರ್ನಾಟಕ ಲೋಕಸೇವಾ ಆಯೋಗ ಆಯ್ಕೆ ಮಾಡಿರುವ ಜೇಷ್ಠತೆಯಂತೆಯೇ ಪರಿಗಣಿಸಿ ಕೌನ್ಸಿಲಿಂಗ್ ಮಾಡುವುದು. ಈ ಸಂಬಂಧ ಆಯುಕ್ತರ ಕಾರ್ಯಾಲಯವು ಕೌನ್ಸಿಲಿಂಗ್ ದಿನಾಂಕವನ್ನು ತಿಳಿಸುತ್ತದೆ.
2. ನೇಮಕಾತಿಯು ತಾತ್ಕಾಲಿಕವಾಗಿದ್ದು ಆಗಿಂದಾಗ್ಗೆ ಈ ಸಂಬಂಧ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.
3. ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ನಡತೆ, ಮೀಸಲಾತಿಗೆ ಸಂಬಂಧಿಸಿದ ಮತ್ತಿತರ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಪ್ರಥಮವಾಗಿ ಆಯುಕ್ತರ ಮುಂದೆ ಹಾಜರುಪಡಿಸಿ ಪರಿಶೀಲನೆಯ ನಂತರ ಈ ದಾಖಲಾತಿಗಳನ್ನು ಹಾಜರಾಗುವ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.
4. ಕರ್ನಾಟಕ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳ (1974)ರಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು.
5. ಪಿ.ಹೆಚ್.ಡಿ./ಎನ್.ಇ.ಟಿ./ಎಸ್.ಎಲ್.ಇ.ಟಿ. ಪರೀಕ್ಷೆ ತೇರ್ಗಡೆ ಹೊಂದಿದವರು ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಮತ್ತು ಭಾಗ–2 ಇದನ್ನು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆಯಾಗತಕ್ಕದ್ದು. ಇಲ್ಲವಾದಲ್ಲಿ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಾಗುವುದಿಲ್ಲ.
6. ಪಿ.ಹೆಚ್.ಡಿ./ಎನ್.ಇ.ಟಿ./ಎಸ್.ಎಲ್.ಇ.ಟಿ. ಪದವಿ ಇಲ್ಲದವರು ಅಂದರೆ ಕೇವಲ ಎಂ.ಫಿಲ್. ಪಾಸು ಮಾಡಿರುವವರು (ದೂರ ಶಿಕ್ಷಣ ಮುಖೇನ ಅಥವಾ ಸಾಂಪ್ರದಾಯಿಕ ಶಿಕ್ಷಣದ ಮುಖೇನ) ಪರಿವೀಕ್ಷಣಾ ಅವಧಿಯಲ್ಲಿ ಪಿ.ಹೆಚ್.ಡಿ./ಎನ್.ಇ.ಟಿ./ಎಸ್.ಎಲ್.ಇ.ಟಿ.ಯಲ್ಲಿ ಮೇಲ್ಕಾಣಿಸಿದ ಇಲಾಖಾ ಪರೀಕ್ಷೆಗಳ ಜೊತೆಗೆ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು. ಇಲ್ಲವಾದಲ್ಲಿ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಾಗುವುದಿಲ್ಲ.
7. ಉಪನ್ಯಾಸಕ ಹುದ್ದೆಗೆ ಅವಶ್ಯಕತೆ ಇರುವ ಓರಿಯೆಂಟೇಶನ್ ಮತ್ತು ರಿಫ್ರೆಶರ್ ಕೋರ್ಸ್ ತರಬೇತಿಯನ್ನು ಪೂರೈಸತಕ್ಕದ್ದು.
8. ಅಭ್ಯರ್ಥಿಗಳ ಜೇಷ್ಠತೆಯು ಕರ್ನಾಟಕ ಲೋಕಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಅಧಿಸೂಚನೆಯನ್ವಯ ಇರತಕ್ಕದ್ದು.
9. ಅಭ್ಯರ್ಥಿಗಳ ನೇಮಕಾತಿಯು ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
10. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಈ ಕುರಿತು ಬಾಕಿ ಇರುವ ಅರ್ಜಿ ಸಂಖ್ಯೆ: 4460/2008, 1150/2009, 1634–1635/2009, 5502/2008, 4463/2008, 5278, 5322, 5268, 8338/2008 ಮತ್ತು 43/2009ರ ಮೇಲೆ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು. ಹಾಗೂ ಈ ತೀರ್ಪುಗಳ ಕುರಿತಾದ ಉಚ್ಚ ನ್ಯಾಯಾಲಯದ ಮೇಲ್ಮನವಿ ತೀರ್ಪಿಗೆ ಬದ್ಧರಾಗಿರತಕ್ಕದ್ದು.
11. ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ:853–59/2009ರ ಮೇಲೆ ದಿನಾಂಕ:19.08.2009ರಂದು ನೀಡಿರುವ ತೀರ್ಪನ್ನು ಪ್ರಶ್ನಿಸಿ ಕರ್ನಾಟಕ ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:26902–14/2009 ಸಲ್ಲಿಸಿದ್ದು, ಈ ರಿಟ್ ಅರ್ಜಿಯ ಮೇಲೆ ರಾಜ್ಯದ ಉಚ್ಚ ನ್ಯಾಯಾಲಯ ನೀಡುವ ತೀರ್ಪಿನನುಸಾರ ಮುಂದಿನ ಕ್ರಮ ಕೈಗೊಳ್ಳುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.
12. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವರ್ಗಾವಣೆ ಪರಿಗಣಿಸಲಾಗುವುದಿಲ್ಲ.
13. ಈ ಅಧಿಸೂಚನೆಯಲ್ಲಿ ಕಾಣಿಸಿರುವ ಅಭ್ಯರ್ಥಿಗಳ ಸಂಬಳ, ಭತ್ಯೆ ಇತ್ಯಾದಿ ಇವುಗಳು ಸ್ಥಳನಿಯುಕ್ತಿ ಆದೇಶ ಹೊರಡಿಸಿ ಅದರಂತೆ ಆಯಾ ಸ್ಥಳಗಳಲ್ಲಿ ಹಾಜರಾದ ದಿನಾಂಕದಿಂದ ಲಭ್ಯವಾಗುತ್ತದೆ.

ಅಭ್ಯರ್ಥಿಗಳು ಅಂದರೆ ಪಿ.ಹೆಚ್.ಡಿ./ಎನ್.ಇ.ಟಿ./ಎಸ್.ಎಲ್.ಇ.ಟಿ. ಪದವಿ ಹೊಂದಿರುವವರು ಕನ್ನಡ ಭಾಷೆ, ಅಕೌಂಟ್ಸ್ ಹೈಯರ್ ಹಾಗೂ ಜನರಲ್ ಲಾ ಭಾಗ–1 ಮತ್ತು ಭಾಗ–2 ಇವುಗಳಲ್ಲಿ ತೇರ್ಗಡೆ ಹೊಂದಿದ ನಂತರವೇ ಪರಿವೀಕ್ಷಣಾ ಅವಧಿ ತೃಪ್ತಿಕರವಾಗಿ ಪೂರೈಸಿದ್ದಾರೆ ಎಂದು ಘೋಷಿಸಲು ಅರ್ಹರಿರುತ್ತಾರೆ. ಅಂತೆಯೇ ಕೇವಲ ಎಂ.ಫಿಲ್. ಪದವಿ ಪಡೆದವರು ಈ ಇಲಾಖಾ ಪರೀಕ್ಷೆಗಳ ಜೊತೆಗೆ ಎನ್.ಇ.ಟಿ./ಎಸ್.ಎಲ್.ಇ.ಟಿ. ಪರೀಕ್ಷೆಯಲ್ಲಿ ತೇರ್ಗಡೆಯಾದಲ್ಲಿ ಮಾತ್ರ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಿರುತ್ತಾರೆ. ಈ ದಿಶೆಯಲ್ಲಿ ಲಗತ್ತಿಸಿರುವ ನಮೂನೆಯಲ್ಲಿ ಒಂದು ಮುಚ್ಚಳಿಕೆಯನ್ನು ಕೌನ್ಸಿಲಿಂಗ್ ಸಮಯದಲ್ಲಿ ಇವರು ತಪ್ಪದೇ 100 ರೂಪಾಯಿ ಛಾಪಾ ಕಾಗದದಲ್ಲಿ ಶಪಥಗ್ರಹಣ ಮಾಡಿ

